# ಕೂಡ್ಲಿಗಿ ತಾಲೂಕಿನ ಬೃಹತ್ ಶಿಲಾಯುಗದ ನೆಲೆಗಳು

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರೌಢಪ್ರಬಂಧ)

ನೊಂದಣಿ ಸಂಖ್ಯೆ: ೧೪೦೧೦೮೦೩೦೦೦೮





ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ–೫೮೩ ೨೭೬

೨೦೧೫

1175

# “ಕೂಡ್ಲಿಗಿ ತಾಲೂಕಿನ ಬೃಹತ್ ಶಿಲಾಯುಗದ ನೆಲೆಗಳು”

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರೌಢಪ್ರಬಂಧ)



ನೊಂದಣಿ ಸಂಖ್ಯೆ:
೧೪೦೧೦೮೦೩೦೦೦೮



ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬
೨೦೧೫

# ಪರಿವಿಡಿ

# ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಸಮೀಕ್ಷೆ ಮತ್ತು ಸ್ವರೂಪ

## ಪ್ರಸ್ತಾವನೆ

ಅಲೆಮಾರಿಯಾಗಿದ್ದ ಮಾನವನು ಒಂದೆಡೆ ನೆಲೆನಿಂತು ಸಹಸ್ರಾರು ವರ್ಷಗಳು ಕಳೆದಿವೆ. ಪ್ರಾರಂಭದಲ್ಲಿ ಗೆಡ್ಡೆ-ಗೆಣಸು ಹಣ್ಣು ಹಂಪಲುಗಳನ್ನು ತಿನ್ನುತ್ತಿದ್ದ ಇವನು ಬೇಟೆಯಾಡುವುದನ್ನು ಕಲಿತುಕೊಂಡನು.ಮುಂದೆ ಪಶು ಸಂಗೋಪನೆಯಲ್ಲದೆ ಕೃಷಿಯನ್ನು ರೂಢಿಸಿಕೊಂಡು ಒಂದು ಸಮಾಜ ಹಾಗೂ ರಾಜ್ಯ ವ್ಯವಸ್ಥೆಯತ್ತ ಹೆಜ್ಜೆಹಾಕಿದನು. ಹೀಗೆ ಹಂತ ಹಂತವಾಗಿ ಪ್ರಗತಿಯತ್ತ ಸಾಗಿ ಬಂದ ಮಾನವನ ಚರಿತ್ರೆಯನ್ನು ಸಮಗ್ರ ಹಾಗೂ ಸೂಕ್ಷ್ಮವಾಗಿ ಅಧ್ಯಯನ ನಡೆಸುವುದು ಅವಶ್ಯಕವಾಗಿದೆ.

ಒಂದು ದೇಶದ ಇತಿಹಾಸವನ್ನು ಒಬ್ಬ ವ್ಯಕ್ತಿಯು ಸಮಗ್ರವಾಗಿ ಅಧ್ಯಯನ ಮಾಡುವುದು ಕಷ್ಟಸಾಧ್ಯ. ಹಿಂದೊಮ್ಮೆ ರಾಜವಂಶ, ಅವರ ಕಾಲಮಾನ, ಯುದ್ಧ ಹಾಗೂ ಸಾಂಸ್ಕೃತಿಕ ಬದುಕನ್ನು ಗಮನದಲ್ಲಿಟ್ಟುಕೊಂಡು ಇತಿಹಾಸವನ್ನು ರಚಿಸುವ ಕಾಲವೊಂದಿತ್ತು, ಆದರೆ ಆಧುನಿಕ ಇತಿಹಾಸ ಲೇಖನ ಕಲೆಯು ಸಂಪೂರ್ಣ ಬದಲಾಗಿದೆ. ಇಂದು ಇತಿಹಾಸವನ್ನು ವಿವಿಧ ದೃಷ್ಟಿಕೋನಗಳಿಂದ ವಿಶ್ಲೇಷಣೆಗೆ ಒಳಪಡಿಸಲಾಗುತ್ತದೆ. ಅಂದರೆ ಜನಾಂಗೀಯ ಇತಿಹಾಸ, ಜನಪದ ಇತಿಹಾಸ, ಪರಿಸರ ಇತಿಹಾಸ, ಮೌಖಿಕ ಇತಿಹಾಸ ಹಾಗೂ ಇನ್ನೂ ಅನೇಕ ವಿಧದ ಇತಿಹಾಸದ ಬಗೆಗೆ ಸಮಗ್ರ ಮತ್ತು ಸೂಕ್ಷ್ಮ ಅಧ್ಯಯನಗಳಾಗುತ್ತಿವೆ. ಅದರಲ್ಲೂ ಪ್ರಾದೇಶಿಕ ಮಟ್ಟದಲ್ಲಿ ಇಂತಹ ಸಮಗ್ರ ಮತ್ತು ಸೂಕ್ಷ್ಮ ಅಧ್ಯಯನಗಳನ್ನು ನಡೆಸುವುದರ ಮೂಲಕ ಆ ಪ್ರದೇಶದ ಮಾನವನ ಜೀವನ ಕ್ರಮವನ್ನು ತಿಳಿಯಲು ಸಾಧ್ಯವಾಗುತ್ತದೆ.

ಈ ನಿಟ್ಟಿನಲ್ಲಿ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ಪ್ರದೇಶವನ್ನು ಸೂಕ್ಷ್ಮ ಅಧ್ಯಯನಕ್ಕಾಗಿ ಆಯ್ದುಕೊಳ್ಳಲಾಗಿದೆ. ಬಳ್ಳಾರಿ ಜಿಲ್ಲೆಯ ದಕ್ಷಿಣ ಭಾಗದಲ್ಲಿರುವ ಈ ತಾಲ್ಲೂಕಿನ ಪರಿಸರವು ಸುತ್ತಮುತ್ತಲಿನ ಪ್ರದೇಶದಲ್ಲಿರುವ ಪರಿಸರಕ್ಕಿಂತ ಭಿನ್ನವೆನಿಸಿದೆ. ಈ ಪ್ರದೇಶದಲ್ಲಿ ಗ್ರಾನೈಟ್ ಶಿಲೆಯ ಬೆಟ್ಟ ಗುಡ್ಡಗಳಿವೆ. ಈ ಬೆಟ್ಟಗಳಲ್ಲಿ ಗವಿಗಳು, ಕಲ್ಲಾಸರೆಗಳು, ನೀರಿನ ತಾಣಗಳು, ನೈಸರ್ಗಿಕವಾಗಿ ಕಂಡುಬರುತ್ತವೆ. ಇಲ್ಲಿನ ಪರಿಸರವು ಬಹುಭಾಗ ಬಯಲುನಾಡು ಆದರೂ ಕುರುಚಲು ಕಾಡುಗಳಿಂದ ಕೂಡಿದೆ.[೧]

ಈ ತಾಲ್ಲೂಕಿನ ಈಶಾನ್ಯ ದಿಕ್ಕಿನಲ್ಲಿರುವ ಸಂಗನಕಲ್ಲು,ಉತ್ತರ ದಿಕ್ಕಿನಲ್ಲಿರುವ ತೆಕ್ಕಲಕೋಟೆ, ಹಳಕುಂದಿ, ಕಪ್ಪಗಲ್ಲು, ಕುಡಿತಿನಿ, ಪೂರ್ವಭಾಗದಲ್ಲಿ ಮೊಳಕಾಲ್ಮೂರು, ಹಾನಗಲ್ಲು, ಬ್ರಹ್ಮಗಿರಿ, ದಕ್ಷಿಣದಲ್ಲಿರುವ ಚಂದ್ರವಳ್ಳಿ, ತಾಳ್ಯ, ಕೂನಬೇವು, ಚಿಪ್ಪನಕೆರೆ ಪಶ್ಚಿಮದಲ್ಲಿ ಹರಪನಹಳ್ಳಿ ತಾಲೂಕಿನ ನೀಲಗುಂದ, ತೆಲಗಿ, ಮಾಡಲಗೆರೆ ನೆಲೆಗಳಲ್ಲಿ ಶಿಲಾಯುಗದ ಮಾನವನ ಕುರುಹುಗಳು ದೊರೆತಿವೆ.

## ಅಧ್ಯಯನದ ಉದ್ದೇಶ

ಮಾನವ ಇಡೀ ಜೀವ ಸಂಕುಲದ ವಿಕಾಸ ಕ್ರಮದಲ್ಲಿ ವಿಶೇಷ ಸ್ಥಾನವನ್ನು ಹೊಂದಿದ್ದಾನೆ. ದೀರ್ಘಾವಧಿಯ ಭೂ ಇತಿಹಾಸಕ್ಕೆ ಹೋಲಿಸಿದರೆ ಮಾನವನ ಪೂರ್ವಜನ ಹುಟ್ಟು ೬೫ ಮಿಲಿಯನ್ ವರ್ಷಗಳ ಹಿಂದಷ್ಟೇ ಆದ ದಾಖಲೆ ಸಿಗುತ್ತದೆ. ಆದಿಮಾನವನ ಉಗಮವಾಗಿ ಸರಿಸುಮಾರು ೧೪ ಮಿಲಿಯನ್ ವರ್ಷಗಳಾಗಿದ್ದರೆ,ಆಧುನಿಕ ಮಾನವನ ಉಗಮ ಕೇವಲ ೨ ಮಿಲಿಯನ್ ವರ್ಷಗಳ ಹಿಂದಷ್ಟೇ ಆಗಿದೆ ಎನ್ನಬಹುದು.[೨] ಇಡೀ ಮನುಕುಲದ ಇತಿಹಾಸವನ್ನು ಸಮಗ್ರವಾಗಿ ಅಧ್ಯಯನ ಮಾಡುವುದು ಕಷ್ಟಸಾಧ್ಯ. ಆದರೆ ಮಾನವನ ಜೀವನ ಕ್ರಮವನ್ನು ಬಿಡಿ ಬಿಡಿಯಾಗಿ ತೋರಿಸುವ ನಿಟ್ಟಿನಲ್ಲಿ ಅದನ್ನು ವಿವಿಧ ದೃಷ್ಠಿಕೋನಗಳಿಂದ ವಿಶ್ಲೇಷಣೆ ಮಾಡಲಾಗುತ್ತದೆ. ಕೂಡ್ಲಿಗಿ ತಾಲ್ಲೂಕು ಪರಿಸರವು ಪ್ರಾಗೈತಿಹಾಸಿಕ ಕಾಲದಿಂದಲೂ ಉತ್ತಮ ಭೌಗೋಳಿಕ ಪರಿಸರ ಹೊಂದಿದ್ದು. ಇದರಿಂದ ಆದಿಮಾನವ ಕೂಡ್ಲಿಗಿ ಪ್ರದೇಶದಲ್ಲಿ ವಿವಿಧ ನೆಲೆಗಳಲ್ಲಿ ವಾಸಿಸುತ್ತಿದ್ದನೆಂದು ಅವನು ಬಿಟ್ಟು ಹೋಗಿರುವ ಕುರುಹುಗಳಿಂದ ತಿಳಿಯಬಹುದಾಗಿದೆ. ಇವು ಅಂದಿನ ಸಂಸ್ಕೃತಿ ಮತ್ತು ಅವನ ಜೀವನ ಶೈಲಿಯನ್ನು ಅರಿಯಲು ಪ್ರಮುಖ ಆಕರಗಳಾಗಿವೆ. ಈ ಹಿನ್ನೆಲೆಯಲ್ಲಿ ಕೂಡ್ಲಿಗಿ ತಾಲ್ಲೂಕಿನ ಪ್ರಾಗೈತಿಹಾಸಿಕ ನೆಲೆಗಳು ಮತ್ತು ಅವುಗಳ ಮಹತ್ವವನ್ನು ಪುರಾತತ್ವ ಹಿನ್ನಲೆಯಲ್ಲಿ ಅಧ್ಯಯನ ಮಾಡುವುದು ಈ ಸಂಶೋಧನೆಯ ಮುಖ್ಯ ಉದ್ದೇಶವಾಗಿದೆ.

ಕೂಡ್ಲಿಗಿ ಪ್ರದೇಶದಲ್ಲಿ ಆದಿಮಾನವನು ನೆಲೆಸಿದ್ದಂತಹ ಅನೇಕ ನೆಲೆಗಳು ಕಂಡುಬರುತ್ತವೆ. ಅವುಗಳು ಜುಮ್ಮೋಬನಹಳ್ಳಿ, ಸಿಡೇಗಲ್ಲು,[೩] ಅಪ್ಪಯ್ಯನಹಳ್ಳಿ, ಕಲ್ಲಹಳ್ಳಿ, ಹುಲಿಕುಂಟೆ, ಕುಮತಿ, ಜರಿಮಲೆ, ಗುಡೇಕೋಟೆ, ಹಾಳಸಾಗರ, ಸುಣ್ಣಮರಡಿ ಗ್ರಾಮಗಳು ಪ್ರಮುಖವಾಗಿವೆ.[೪] ಈ ನೆಲೆಗಳಲ್ಲಿ ಹಳೆ ಶಿಲಾಯುಗ, ಮಧ್ಯ ಶಿಲಾಯುಗ, ಅಥವಾ ಸೂಕ್ಷ್ಮಶಿಲಾಯುಗ, ನವಶಿಲಾಯುಗ, ಶಿಲಾ-ತಾಮ್ರಯುಗ, ಬೃಹತ್ ಶಿಲಾಯುಗ ಅಥವಾ ಕಬ್ಬಿಣಯುಗ, ಹಾಗೂ ಆದಿ ಇತಿಹಾಸ ಕಾಲದ ಕುರುಹುಗಳು ಕಂಡುಬಂದಿವೆ. ಬಹುತೇಕವಾಗಿ ಕೂಡ್ಲಿಗಿ ಪ್ರದೇಶದಲ್ಲಿ ಬೃಹತ್ ಶಿಲಾಯುಗದ ಕುರುಹುಗಳು ಹೆಚ್ಚಾಗಿ ಕಂಡುಬಂದಿದ್ದು, ಅವುಗಳನ್ನು ಕುರಿತಾದ ವ್ಯವಸ್ಥಿತ ಅಧ್ಯಯನ ಆಗಬೇಕಾಗಿದೆ.

ಈ ನಿಟ್ಟಿನಲ್ಲಿ ಕೂಡ್ಲಿಗಿ ತಾಲ್ಲೂಕಿನಲ್ಲಿ ಕಂಡುಬರುವ ಬೃಹತ್ ಶಿಲಾಯುಗದ ನೆಲೆಗಳು ಕೆಲವು ಕಡೆ ಸಾಕಷ್ಟು ದುಃಸ್ಥಿತಿಯಲ್ಲಿದ್ದರೆ, ಇನ್ನೂ ಕೆಲವು ಕಡೆ ಕಾಲದ ತುಳಿತಕ್ಕೆ ಸಿಕ್ಕು ಅವನತಿಗೆ

ಈಡಾಗಿವೆ ಇಲ್ಲವೆ ಮೂಲರೂಪದಲ್ಲಿಯೇ ಇಂದಿಗೂ ಉಳಿದು ಬಂದಿವೆ.ಆದ್ದರಿಂದ ಬೃಹತ್ ಶಿಲಾಯುಗದ ನೆಲೆಗಳ ಸ್ವರೂಪ ಮತ್ತು ಮಹತ್ವವನ್ನು ಪುರಾತತ್ವ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವುದು. ಈ ಸಂಶೋಧನೆಯ ಮತ್ತೊಂದು ಬಹುಮುಖ್ಯ ಉದ್ದೇಶವಾಗಿದೆ.

ಈ ಪ್ರದೇಶದಲ್ಲಿರುವ ಬೃಹತ್ ಶಿಲಾಯುಗದ ನೆಲೆಗಳ ವೈಶಿಷ್ಟತೆ ಹಾಗೂ ಇತರೆಡೆ ದೊರಕಿರುವ ಬೃಹತ್ ಶಿಲಾಯುಗದ ನೆಲೆಗಳಿರುವ ಸಂಬಂಧ, ಹೋಲಿಕೆ, ವ್ಯತ್ಯಾಸ, ಪ್ರಭಾವವೇನು? ಎಂಬುದನ್ನು ಪರಿಶೀಲಿಸಬೇಕಿದೆ. ಹಾಗೂ ವ್ಯಾಪಕ ಸಮೀಕ್ಷೆ ನಡೆಸಬೇಕಿದೆ. ಅಲ್ಲದೇ ಈ ಸಂಸ್ಕೃತಿಯು ಪಸರುವಿಕೆಯಲ್ಲಾದ ಬದಲಾವಣೆ, ಅದರ ವಿಸ್ತರಣೆ ಕುರಿತು ತಾರ್ಕಿಕವಾಗಿ ವಿಶ್ಲೇಷಿಸ ಬೇಕಾದ ಅಗತ್ಯತೆ ಇದೆ.

ಕೂಡ್ಲಿಗಿ ತಾಲ್ಲೂಕಿನಲ್ಲಿ ಕಂಡುಬರುವ ಬೃಹತ್ ಶಿಲಾಯುಗದ ನೆಲೆಗಳಗಳನ್ನು ಒಂದೆಡೆ ಪ್ರಾಥಮಿಕ ಹಂತದಲ್ಲಿ ದಾಖಲಿಸುವುದು ಅಧ್ಯಯನದ ಪ್ರಮುಖ ಉದ್ದೇಶವಾಗಿದೆ. ಈ ನೆಲೆಗಳಗಲ್ಲಿ ದೊರೆಯಬಹುದಾದ ಅವಶೇಷಗಳನ್ನು ಆಧಾರವಾಗಿಟ್ಟುಕೊಂಡು, ಬೃಹತ್ ಶಿಲಾಯುಗದ ಮಾನವನ ಜೀವನಕ್ರಮ, ವೈಶಿಷ್ಟತೆ ಮೊದಲಾದ ವಿವರಗಳನ್ನು ವಿಶ್ಲೇಷಿಸಲಾಗಿದೆ.

ಕೂಡ್ಲಿಗಿ ತಾಲ್ಲೂಕಿನ ಭೌಗೋಳಿಕ ಪರಿಸರವು ನೈಸರ್ಗಿಕವಾಗಿ ಆದಿಮಾನವನು ವಾಸಿಸಲು ಪೂರಕವಾಗಿತ್ತೇ? ಅಥವಾ ಇಲ್ಲವೇ? ಎಂಬ ಅಂಶವನ್ನು ಈ ಸಂಶೋಧನೆಯ ಮೂಲಕ ಚರ್ಚಿಸಲಾಗಿದೆ. ಕೂಡ್ಲಿಗಿ ತಾಲ್ಲೂಕಿನ ಬೃಹತ್ ಶಿಲಾಯುಗದ ನೆಲೆಗಳನ್ನು ಪ್ರಕಟಿತ ಮತ್ತು ಅಪ್ರಕಟಿತ ಮಾಹಿತಿಗಳನ್ನು ಅನುಸರಿಸಿ, ಅಂದಿನ ಸಮಾಜದ ಜೀವನ ಕ್ರಮವನ್ನು ನಿರೂಪಿಸುವುದು. ಈ ಅಧ್ಯಯನದ ಮಹತ್ವ ಕಾರ್ಯಗಳಲ್ಲಿ ಗಮನಾರ್ಹ ಅಂಶ ಎನ್ನಿಸುತ್ತದೆ.

**ಅಧ್ಯಯನದ ವ್ಯಾಪ್ತಿ**

ಸಾಮಾನ್ಯವಾಗಿ ಯಾವುದೇ ಒಂದು ಸಂಶೋಧನೆಯು ಸ್ಪಷ್ಟವಾಗಿ ಯಶಸ್ವಿಯಾಗಬೇಕಾದರೆ, ಅದಕ್ಕೆ ಒಂದು ನಿರ್ದಿಷ್ಟವಾದ ಚೌಕಟ್ಟು ಅಥವಾ ವ್ಯಾಪ್ತಿ ಇರುವುದು ಅತೀ ಮುಖ್ಯವಾದುದು.ಪ್ರಸ್ತುತ ಅಧ್ಯಯನದ ಶೀರ್ಷಿಕೆಯೇ ಸೂಚಿಸುವಂತೆ ಕೂಡ್ಲಿಗಿ ತಾಲ್ಲೂಕಿಗೆ ಮಾತ್ರ ಸೀಮಿತಗೊಳಿಸಲಾಗಿದೆ. ಆದರೂ ಸಹ ಅವಶ್ಯಕತೆಗನುಗುಣವಾಗಿ ಈ ಪ್ರದೇಶದ ಸುತ್ತಮುತ್ತಲಿನ ಪ್ರಾಗೈತಿಹಾಸಿಕ ಕುರುಹುಗಳನ್ನು ಪ್ರಾಸಂಗಿಕವಾಗಿ ಗಮನಿಸಲಾಗುವುದು.

ಕೂಡ್ಲಿಗಿ ಬಳ್ಳಾರಿ ಜಿಲ್ಲೆಯ ಪಶ್ಚಿಮ ತಾಲ್ಲೂಕುಗಳಲ್ಲಿ ದೊಡ್ಡ ತಾಲ್ಲೂಕು ಆಗಿದ್ದು. ಇದರ ಒಟ್ಟು ವಿಸ್ತೀರ್ಣ ೧.೫೨೯೪೩೫೦ ಚ.ಕಿ.ಮೀ. ಇದೆ. ಒಟ್ಟಾರೆ ಈ ತಾಲ್ಲೂಕು ನಾಲ್ಕು ಹೋಬಳಿಗಳನ್ನು, ೮೫ ಕಂದಾಯ ಗ್ರಾಮಗಳನ್ನು ಒಳಗೊಂಡಿದೆ.[೫] ನಾಲ್ಕು ಹೋಬಳಿ ಇವುಗಳಲ್ಲಿ ಗುಡೇಕೋಟೆ, ಹೊಸಹಳ್ಳಿ ಹೋಬಳಿಗಳಲ್ಲಿ ಪ್ರಾಗೈತಿಹಾಸಿಕ ನೆಲೆಗಳನ್ನು ಈಗಾಗಲೇ ವಿದ್ವಾಂಸರು ಗುರುತಿಸಿರುತ್ತಾರೆ. ಅವುಗಳಲ್ಲಿ ಹುಲಿಕುಂಟೆ, ಕುಮತಿ, ಬೆಳಗಟ್ಟ, ಸಿಡೇಗಲ್ಲು, ಜುಮ್ಮೋಬನಹಳ್ಳಿ, ಕಲ್ಲಹಳ್ಳಿ, ಗುಡೇಕೋಟೆ, ಅಪ್ಪಯ್ಯನಹಳ್ಳಿ, ರಾಮದುರ್ಗ, ಜರಿಮಲೆ ಸುಣ್ಣಮರಡಿ,

ಗ್ರಾಮಗಳಲ್ಲಿ ಪ್ರಾಗೈತಿಹಾಸಿಕ ಕುರುಹುಗಳಾದ ವಿವಿಧ ಕಾಲಘಟ್ಟದ ಮಡಿಕೆ ಚೂರುಗಳು, ಬಳಸಿ ಬಿಟ್ಟಿರುವ ಕಲ್ಲಿನ ಆಯುಧಗಳು, ಶಿಲಾಗೋರಿಗಳು, ಗೀರುಚಿತ್ರಗಳು, ವರ್ಣಚಿತ್ರಗಳು, ಗವಿಗಳು, ಕಬ್ಬಿಣದ ಕುರುಹುಗಳು ದೊರೆತಿವೆ. ಈ ಪ್ರದೇಶಗಳಲ್ಲಿ ಕಂಡುಬರುವ ಆಕರಗಳು ಮತ್ತು ಸಂಗ್ರಹಿಸಿದ ಮಾಹಿತಿಯಿಂದ ಈ ತಾಲ್ಲೂಕಿನ ಪ್ರಾಗಿತಿಹಾಸದ ಒಂದು ಕಾಲಘಟ್ಟವಾದ ಬೃಹತ್ ಶಿಲಾಯುಗದ ನೆಲೆಗಳ ಮಹತ್ವವನ್ನು ಹೇಳುವ ಹಿನ್ನೆಲೆಯಲ್ಲಿ ಈ ಅಧ್ಯಯನ ಕೈಗೊಳ್ಳಲಾಗಿದೆ.

ಒಟ್ಟಾರೆಯಾಗಿ ಒಂದು ವಿಷಯದ ಬಗ್ಗೆ ಪರಿಪೂರ್ಣ ವಿಷಯ ನಿಶ್ಕರ್ಷೆಯಾಗ ಬೇಕಾದರೆ ಅದಕ್ಕೆ ಅದರದ್ದೇ ಆದ ಅಧ್ಯಯನದ ವ್ಯಾಪ್ತಿ ಹೊಂದುವುದು ಅತ್ಯಾವಶ್ಯಕವಾಗುತ್ತದೆ.

**ಅಧ್ಯಯನದ ವಿಧಾನ**

"ಕೂಡ್ಲಿಗಿ ತಾಲ್ಲೂಕಿನ ಬೃಹತ್ ಶಿಲಾಯುಗದ ನೆಲೆಗಳು" ಎಂಬ ಅಧ್ಯಯನದ ವಿಷಯವು ಕ್ಷೇತ್ರಕಾರ್ಯ ಆಧಾರಿತವಾಗಿದ್ದು ಅಧ್ಯಯನದ ವ್ಯಾಪ್ತಿಗೆ ಒಳಪಡುವ ಪ್ರತಿಯೊಂದು ಗ್ರಾಮ ಅಥವಾ ಪ್ರದೇಶಗಳಿಗೆ ನೇರವಾಗಿ ಬೇಟಿ ನೀಡಿ. ಅಲ್ಲಿ ದೊರೆಯುವ ಅವಶೇಷಗಳನ್ನು ಪರಿಶೀಲಿಸಿ ದಾಖಲಿಸಿ ಕೊಳ್ಳುವುದರ ಜೊತೆಗೆ ಅವುಗಳ ಛಾಯಚಿತ್ರಗಳನ್ನು ಪಡೆದು ಕೊಂಡು ಕಾಲಾನುಕ್ರಮದಲ್ಲಿ ವಿಂಗಡಿಸಿ ವಿಶ್ಲೇಷಣೆ ಮಾಡಲಾಗಿದೆ. ಹಾಗೆಯೇ ಪ್ರಾಥಮಿಕ ಆಕರಗಳ ಜೊತೆಗೆ ಅನುಷಂಗಿಕ ಆಕರಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಅಳವಡಿಸಿಕೊಳ್ಳಲಾಗುವುದು. ಈ ಪರಿಸರದ ವ್ಯಾಪ್ತಿಯಲ್ಲಿ ಬರುವ ಪ್ರದೇಶಗಳಲ್ಲಿನ ಮೌಖಿಕ ಕಥನಗಳನ್ನು ಐತಿಹ್ಯಗಳನ್ನು ಹೊಂದಿರುವಂತಹ ಅಥವಾ ತಿಳಿದಿರವಂತಹ ವ್ಯಕ್ತಿಗಳನ್ನು ಬೇಟಿ ಮಾಡಿ, ಚರ್ಚಿಸಿ. ವಿಷಯಗಳನ್ನು ಸಂಗ್ರಹಿಸಲಾಗುವುದು. ಎಲ್ಲಾ ಬಗೆಯ ಲೇಖನಗಳು, ನಿಯತ ಕಾಲಿಕೆಯಲ್ಲಿ ದೊರೆಯುವ ಆಧಾರಗಳನ್ನು ಮತ್ತು ಸಂಶೋಧನಾ ಲೇಖನಗಳನ್ನು, ಎಂ.ಫಿಲ್, ಪಿಎಚ್.ಡಿ ಮಹಾಪ್ರಬಂಧಗಳನ್ನು ಆಧರಿಸಿ ಅವಶ್ಯಕ ವಿಷಯಗಳನ್ನು ಸಂಗ್ರಹಿಸಿ ಪರಿಶೀಲಿಸಲಾಗಿದೆ. ನಂತರ ವಿಷಯಾನುಸಾರ ವರ್ಗೀಕರಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಈ ಎಲ್ಲಾ ಆಕರಗಳ ಹಿನ್ನೆಲೆಯಲ್ಲಿ "ಕೂಡ್ಲಿಗಿ ತಾಲ್ಲೂಕಿನ ಬೃಹತ್ ಶಿಲಾಯುಗದ ನೆಲೆಗಳನ್ನು" ಕುರಿತು ಅಧ್ಯಯನ ಮಾಡುವ ಪ್ರಯತ್ನ ಕೈಗೊಳ್ಳಲಾಗಿದೆ.

**ಈವರೆಗಿನ ಅಧಯನದ ಸಮೀಕ್ಷೆ**

ಈ ವರೆಗೆ ಕೂಡ್ಲಿಗಿ ತಾಲ್ಲೂಕಿನ ಬಗ್ಗೆ ಪೂರ್ಣ ಪ್ರಮಾಣದಲ್ಲಿ ವ್ಯವಸ್ಥಿತ ಅಧ್ಯಯನಗಳು ನಡೆದು ಬಂದಿರುವುದು ತೀರಾ ವಿರಳ. ಆದರೆ ಈ ಪರಿಸರದ ಕುರಿತಾಗಿ ಕೆಲ ವಿಚಾರಗಳ ಬಗ್ಗೆ ಬಿಡಿಬಿಡಿಯಾಗಿ ಅಲ್ಲಲ್ಲಿ ನಡೆದಿರುವ ಅಧ್ಯಯನಗಳು ಕಾಣಿಸಿಗುತ್ತವೆ ಅವುಗಳು ಈ ಕೆಳಗಿನಂತಿವೆ.

ಫೂಟ್ ಆರ್.ಬಿ. ಇವರು ೧೯೧೬ರಲ್ಲಿ "ಮದ್ರಾಸಿನ ಇಂಡಿಯನ್ ಪ್ರೀ ಹಿಸ್ಟರಿಕ್ ಅಂಡ್ ಪ್ರೋಟೋ ಹಿಸ್ಟಾರಿಕ್ ಆಂಟಿಕ್ವಿಟೀಸ್" ಎಂಬ ವರದಿಯಲ್ಲಿ ಕೂಡ್ಲಿಗಿ ತಾಲ್ಲೂಕಿನ ಪೂರ್ವೇತಿಹಾಸವನ್ನು

ಕುರಿತಂತೆ ಬೆಳಗಟ್ಟ, ರಾಮದುರ್ಗಾ, ಕಲ್ಲಹಳ್ಳಿ ಗ್ರಾಮಗಳು ನವಶಿಲಾಯುಗದ ನೆಲೆಗಳೆಂದು ಗುರುತಿಸಿ ಈ ಪ್ರದೇಶಗಳ ಪ್ರಾಗಿತಿಹಾಸವನ್ನು ತಿಳಿಸಿರುತ್ತಾರೆ. ನಂತರ ಮೆಡೋಸ್ ಟೇಲರವರು ೧೯೪೧ ರಲ್ಲಿ ಮೆಗಲೆಥಿಕ್ಸ ಥಮ್‌ಬೂಸ್ ಅಂಡ್ ಅದರ್ ರಿಮೈನ್ಸ್ ಇನ್‌ದಿ ಡೆಕ್ಕನ್ ಹೈದರಾಬಾದ್" ಎಂಬ ಗ್ರಂಥದಲ್ಲಿ ಈ ತಾಲ್ಲೂಕಿನ ಪ್ರಾಗೈತಿಹಾಸಿಕ ನೆಲೆಗಳನ್ನು ಗುರುತಿಸಿದ್ದಾರೆ.

ಕೆ.ಪೆದ್ದಯ್ಯರವರು ೧೯೭೩ರಲ್ಲಿ "ಇನ್ವೆಸ್ಟಿಗೇಶನ್ ಇನ್ ಸೌತ್ ಇಂಡಿಯಾ ಲೀಡೆನ್" ಎಂಬ ವರದಿಯಲ್ಲಿ ಈ ತಾಲ್ಲೂಕಿನ ಸಿಡೇಗಲ್ಲು ನವಶಿಲಾಯುಗದ ನೆಲೆ ಎಂದು ಅಲ್ಲಿ ದೊರೆತಿರುವ ಶಿಲೋಪಕರಣಗಳಿಂದ ಗುರುತಿಸಿದ್ದಾರೆ. ನಂತರ ೧೯೭೪ರಲ್ಲಿ ಸುಂದರ ಅ. ಇವರು"ಕರ್ನಾಟಕದ ಪ್ರಾಗಿತಿಹಾಸ ಕಾಲದ ಕಲೆ" ಎಂಬ ಗ್ರಂಥದಲ್ಲಿ ಅಪ್ಪಯ್ಯನಹಳ್ಳಿಯಲ್ಲಿ ಶಿಲಾ-ತಾಮ್ರಯುಗ, ಬೃಹತ್ ಶಿಲಾಯುಗ, ಇತಿಹಾಸ ಆರಂಭಯುಗದ ವರ್ಣ ಚಿತ್ರಗಳನ್ನು ಗುರುತಿಸಿದ್ದಾರೆ.[೬]

ಬಿ.ಎಂ. ಚಂದ್ರಶೇಖರಯ್ಯನವರು ೧೯೮೮ರಲ್ಲಿ "ಕೂಡ್ಲಿಗಿ ತಾಲ್ಲೂಕು ದರ್ಶನ" ಎಂಬ ಗ್ರಂಥದಲ್ಲಿ ಕೂಡ್ಲಿಗಿ ತಾಲೂಕಿನ ಭೌಗೋಳಿಕತೆ ಮತ್ತು ಇಲ್ಲಿನ ಪ್ರೇಕ್ಷಣಿಯ ಸ್ಥಳಗಳನ್ನು ಕುರಿತು ಸಂಕ್ಷಿಪ್ತ ಮಾಹಿತಿಯನ್ನು ನೀಡಿರುತ್ತಾರೆ.[೭] ತಿಪ್ಪೇಸ್ವಾಮಿ ಹೆಚ್ ಇವರು ತಮ್ಮ "ಕೂಡ್ಲಿಗಿ ತಾಲ್ಲೂಕಿನ ಪ್ರಾಗೈತಿಹಾಸಿಕ ನೆಲೆಗಳು" ಎಂಬ ಲೇಖನದಲ್ಲಿ ಆದಿ ಹಳೆಶಿಲಾಯುಗದ ನೆಲೆ ಜುಮ್ಮೋಬನಹಳ್ಳಿ ಮತ್ತು ಸೂಕ್ಷ್ಮ ಶಿಲಾಯುಗದ ನೆಲೆಗಳೆಂದು ಸಿಡೇಗಲ್ಲು, ಜರಿಮಲೆಯನ್ನು ಅಲ್ಲಿ ದೊರೆತಿರುವ ಅವಶೇಷಗಳ ಹಿನ್ನಲೆಯಲ್ಲಿ ಗುರುತಿಸಿ, ೨೦೦೦ ದಲ್ಲಿ ಹಂಪಿಯಲ್ಲಿ ಸಮಾವೇಶಗೊಂಡಿದ್ದ ಕರ್ನಾಟಕ ಇತಿಹಾಸ ಅಕಾಡೆಮಿಯ ೧೪ನೇ ಸಮ್ಮೇಳನದಲ್ಲಿ ಭಾಗವಹಿಸಿ ಲೇಖನ ಮಂಡಿಸಿ, ಇತಿಹಾಸ ದರ್ಶನ ಸಂಪುಟ ೧೬ರಲ್ಲಿ ಪ್ರಕಟಿಸಿರುತ್ತಾರೆ.[೮]

ನಂತರ ತಮ್ಮ ಮತ್ತೊಂದು ಲೇಖನವಾದ "ಕೂಡ್ಲಿಗಿ ತಾಲ್ಲೂಕಿನ ಅಪರೂಪದ ಮಾನವಕೃತಿಗಳು" ಎಂಬುದರಲ್ಲಿ ಹುಲಿಕುಂಟೆ, ಕುಮತಿ ನೆಲೆಗಳಲ್ಲಿ ಬೃಹತ್ ಶಿಲಾಗೋರಿಗಳನ್ನು ಪತ್ತೆಹಚ್ಚೆ ಅವುಗಳು ಭಾರತದಲ್ಲಿಯೇ ದೊರೆತಂತಹ ಅಪರೂಪದ ಮಾನವಾಕೃತಿಗಳೆಂದು, ಹಾಗೂ ಅವುಗಳ ಬಗ್ಗೆ ಇರುವ ಐತಿಹ್ಯಗಳನ್ನು, ಮೌಖಿಕ ಕಥನವನ್ನು ವಿವರಿಸಿರುತ್ತಾರೆ.[೯] ರವಿ ಕುಮಾರ ಎನ್.ಎಂ. ಮತ್ತು ವೃಷಬೇಂದ್ರ ಚಾರ್ಯರವರು "ಮುನ್ನಡೆಯಲ್ಲಿ ಕೂಡ್ಲಿಗಿ' ಎಂಬ ಗ್ರಂಥದಲ್ಲಿ (ಕೂಡ್ಲಿಗಿ ತಾಲ್ಲೂಕಿನ ಸಮಗ್ರ ದರ್ಶನ) ಎಂಬ ಸಂಪಾದಿತ ಗ್ರಂಥದಲ್ಲಿ ಈ ತಾಲ್ಲೂಕಿನ ಅಂಕಿ ಅಂಶಗಳ ಮಾಹಿತಿ, ಶಾಸನಗಳ ಸಮೀಕ್ಷೆ ಮತ್ತು ಇತರೆ ವಿವರನ್ನು ನೀಡಿರುತ್ತಾರೆ.[೧೦] ಹಾಗೂ ಕೆ.ಬಿ.ಶಿವತಾರಕ್ ೨೦೦೧ರಲ್ಲಿ "ಕರ್ನಾಟಕ ಪುರಾತತ್ವ ನೆಲೆಗಳು" ಎಂಬ ಗ್ರಂಥದಲ್ಲಿ ಕೂಡ್ಲಿಗಿ ತಾಲ್ಲೂಕಿನ ಪ್ರಾಗೈತಿಹಾಸಿಕ ನೆಲೆಗಳ ಬಗ್ಗೆ ಉಲ್ಲೇಖಿಸಿದ್ದಾರೆ.[೧೧] ನಂತರ ವಿರುಪಾಕ್ಷಿ ಪೂಜಾರಹಳ್ಳಿಯವರು "ಚಿನ್ನ ಹಗರಿ ಸಿರಿ" ಎಂಬ ಗ್ರಂಥವನ್ನು ೨೦೦೬ರಲ್ಲಿ ಪ್ರಕಟಿಸಿ ಅದರಲ್ಲಿ ಇವರು ಚಿನ್ನ ಹಗರಿ ನದಿಪರಿಸರದ ಭೌಗೋಳಿಕತೆಯನ್ನು ಮತ್ತು ನದಿ ದಂಡೆಯಲ್ಲಿ ದೊರೆತಿರುವ ಪ್ರಾಚ್ಯ ಅವಶೇಷಗಳನ್ನು ಕುರಿತು ವಿವರಿಸಿರುತ್ತಾರೆ.[೧೨] ಲೋಕೇಶ ಜಿ.ಎಂ. "ಚಿನ್ನ ಹಗರಿ ನದಿ ಪರಿಸರದ ಚಾರಿತ್ರಿಕ ಅಧ್ಯಯನ" ಎಂಬ ವಿಷಯವನ್ನು ಕುರಿತು ಸಂಶೋಧನೆ ಕೈಗೊಂಡು

ಎಂ.ಫಿಲ್ ನಿಂಬಂಧವನ್ನು ಸಲ್ಲಿಸಿರುತ್ತಾರೆ. ಶ್ರೀನಿವಾಸ್ ಎಲ್ ಇವರು ೨೦೧೦ರಲ್ಲಿ "ಹಂಪಿ ಪರಿಸರದ ಆದಿಮಾನವನ ನೆಲೆಗಳು" ಎಂಬ ಗ್ರಂಥವನ್ನು ಪ್ರಕಟಿಸಿ ಇದರಲ್ಲಿ ಕೂಡ್ಲಿಗಿ ತಾಲ್ಲೂಕಿನಲ್ಲಿ ಕಂಡುಬರುವ ಪ್ರಾಗೈತಿಹಾಸಿಕ ನೆಲೆಗಳ ಬಗ್ಗೆ ಉಲ್ಲೇಖಿಸಿರುತ್ತಾರೆ.[೧೩]

ಕೊಟ್ರೇಶ ಎಂ. ಇವರ ೨೦೧೧ರಲ್ಲಿ " ಬಳ್ಳಾರಿ ಜಿಲ್ಲೆಯ ಕೋಟೆಗಳು" ಎಂಬ ಗ್ರಂಥದಲ್ಲಿ ಕೂಡ್ಲಿಗಿ ತಾಲ್ಲೂಕಿನ ಚಾರಿತ್ರಿಕ ಕಾಲಘಟ್ಟದ ಕೋಟೆಗಳ ಬಗ್ಗೆ ವಿವರಣೆ ನೀಡಿರುತ್ತಾರೆ. ವಾಸುದೇವ ಬಡಿಗೇರರವರು ೨೦೧೨ರಲ್ಲಿ "ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ"ಎಂಬ ಗ್ರಂಥದಲ್ಲಿ ಕೂಡ್ಲಿಗಿ ತಾಲ್ಲೂಕಿನ ಬೃಹತ ಶಿಲಾಯುಗದ ನೆಲೆಗಳಾದ ಹುಲಿಕುಂಟೆ, ಕುಮತಿ, ಗ್ರಾಮಗಳಲ್ಲಿ ದೊರೆತಿರುವ ಅವಶೇಷಗಳನ್ನು ಕುರಿತು ತಿಳಿಸಿರುತ್ತಾರೆ.[೧೪] ಉಜ್ಜನಿರುದ್ರಪ್ಪ ಇವರು ೨೦೧೨ರಲ್ಲಿ 'ಕೌತುಕ' ಎಂಬ ಗ್ರಂಥದಲ್ಲಿ ಕೂಡ್ಲಿಗಿ ತಾಲ್ಲೂಕಿನ ಕೌತುಕದ ವಿಷಯಗಳಾದ ರಾಜ್ಯ ಇಲ್ಲದ ಜರಿಮಲೆ ರಾಜನ ಕಥೆ, ಕೂಡ್ಲಿಗಿಯಲ್ಲಿ ಗಾಂಧೀಜಿ ಚಿತಾಬಸ್ಮ, ದೈವತ್ವ ಪಡೆದ ಲಂಬಾಣಿ ಸೈನಿಕ, ಹಾಗೂ ಇನ್ನಿತರೆ ಚಾರಿತ್ರಿಕ ಸಂಗತಿಗಳನ್ನು ಒಳಗೊಂಡಿರುವ ೩೫ ಕೃತಿಗಳನ್ನು ಈ ಗ್ರಂಥದಲ್ಲಿ ಪ್ರಕಟಿಸಿರುತ್ತಾರೆ.[೧೫]

ನಂತರ ಇವರು ೨೦೧೪ರಲ್ಲಿ "ಅಚ್ಚರಿ" ಎಂಬ ಮತ್ತೊಂದು ಪುಸ್ತಕವನ್ನು ಪ್ರಕಟಿಸಿ ಕೂಡ್ಲಿಗಿ ತಾಲ್ಲೂಕಿನ ಅಚ್ಚರಿಯ ವಿಷಯಗಳನ್ನು ಈ ಗ್ರಂಥದಲ್ಲಿ ವಿವರಿಸಿರುತ್ತಾರೆ. ಇದು ಸಹ ೩೦ ಕೃತಿಗಳನ್ನು ಒಳಗೊಂಡಿದೆ. ಹಾಗೂ ಭೀಮಣ್ಣ ಗಜಾಪುರ, ಇವರು "ಕನಸ್ಸುಗಳಿಗೆ ರೆಕ್ಕೆ ಕಟ್ಟಿದವರು" ಎಂಬ ಪ್ರತಿಕಾ ವರದಿಯನ್ನು ಆಧರಿಸಿ ಪುಸ್ತಕವನ್ನು ಪ್ರಕಟಿಸಿರುತ್ತಾರೆ. ಇದರಲ್ಲೂ ಸಹ ಈ ತಾಲ್ಲೂಕಿಗೆ ಸಂಬಂಧಿಸಿದ ಮಾಹಿತಿಯನ್ನು ಹೊದಗಿಸಿರುತ್ತಾರೆ.[೧೬]

ಹೀಗೆ ಕೂಡ್ಲಿಗಿ ತಾಲ್ಲೂಕಿನ ಬಗ್ಗೆ ಅಥವಾ ಕೂಡ್ಲಿಗಿ ತಾಲ್ಲೂಕುನ್ನು ಕುರಿತಂತೆ ವಿವಿಧ ರೀತಿಯ ಅಧ್ಯಯನಗಳು, ಲೇಖನಗಳು, ಗ್ರಂಥಗಳು, ಪತ್ರಿಕೆ ವರದಿಗಳು ಈ ತಾಲ್ಲೂಕಿನ ಪೂರ್ವೇತಿಹಾಸ ಮತ್ತು ಇತಿಹಾಸ ಸಂಸ್ಕೃತಿಯ ಬಗ್ಗೆ ಕೆಲವು ಕೃತಿಗಳು ಪ್ರಕಟವಾಗಿದ್ದರೂ ಅವು ನಿರ್ದಿಷ್ಟವಾದ ಒಂದು ವಿಷಯವನ್ನೋ ಅಥವಾ ಒಂದು ಸ್ಥಳವನ್ನೋ ಸಂಗತಿಯನ್ನು ಕುರಿತು ಚರ್ಚಿಸಿವೆ. ಹೀಗೆ ಇಡೀ ಕೂಡ್ಲಿಗಿ ತಾಲ್ಲೂಕನ್ನು ಗಮನದಲ್ಲಿಟ್ಟುಕೊಂಡು ಈ ತಾಲ್ಲೂಕಿನ ಬಗ್ಗೆ ದೊರೆಯುವ ಎಲ್ಲಾ ಆಕರಗಳನ್ನು ಬಳಸಿಕೊಂಡು ನಡೆಸಿರುವ "ಕೂಡ್ಲಿಗಿ ತಾಲ್ಲೂಕಿನ ಬೃಹತ್ ಶಿಲಾಯುಗದ ನೆಲೆಗಳು" ಎಂಬ ಶೀರ್ಷಿಕೆ ಅಡಿಯಲ್ಲಿ ಅಧ್ಯಯನ ಕೊರತೆ ಕಂಡುಬರುವುದರಿಂದ ಈ ಮೇಲಿನ ಆಕರಗಳನ್ನು ಪ್ರಾಮಾಣಿಕವಾಗಿ ಬಳಸಿಕೊಂಡು ತಾಲ್ಲೂಕಿನ ಬೃಹತ್ ಶಿಲಾಯುಗದ ಸಂಸ್ಕೃತಿಯನ್ನು ಕುರಿತು ಪುರಾತತ್ವದ ಹಿನ್ನೆಲೆಯಲ್ಲಿ ಅಧ್ಯಯನ ಕೈಗೊಳ್ಳಲಾಗಿದೆ.

**ಅಧ್ಯಯನದ ಸ್ವರೂಪ**

ಪ್ರತಿಯೊಂದು ಪ್ರದೇಶವು ತನ್ನದೇ ಆದ ಮಹತ್ವವನ್ನು ಹೊಂದಿರುತ್ತದೆ. ಅದರಂತೆ ಕೂಡ್ಲಿಗಿ ತಾಲ್ಲೂಕು ಪರಿಸರವು ಸಹ ತನ್ನದೇ ಆದ ಮಹತ್ವನ್ನು ಹೊಂದಿದೆ. ಹಾಗೇಯೇ ಯಾವುದೇ

ಒಂದು ವಿಷಯವನ್ನು ಕುರಿತು ಕೈಗೊಳ್ಳುವ ಅಧ್ಯಯನವು ಸೂಕ್ಷ್ಮವೂ, ಸಮಗ್ರವೂ ಜೊತೆಗೆ ವ್ಯವಸ್ಥಿತವಾದ ಕ್ರಮಬದ್ಧವಾದ ರೀತಿಯಲ್ಲಿ ಇರಬೇಕಾದರೆ ಅದಕ್ಕೆ ತನ್ನದೇ ಆದ ಅಧ್ಯಯನದ ಸ್ವರೂಪ ಅವಶ್ಯಕವಾಗಿರುತ್ತದೆ. ಆಗಮಾತ್ರ ಆ ವಿಷಯವನ್ನು ಕುರಿತು ನಡೆಸಿದ ಅಧ್ಯಯನವು ವ್ಯವಸ್ಥಿತವಾದ ಅಧ್ಯಯನವಾಗಿ ಹೊರಹೊಮ್ಮಲು ಸಾಧ್ಯವಾಗುತ್ತದೆ.

"ಕೂಡ್ಲಿಗಿ ತಾಲ್ಲೂಕಿನ ಬೃಹತ್ ಶಿಲಾಯುಗದ ನೆಲೆಗಳು" ಎಂಬ ವಿಷಯದ ಕುರಿತು ವಿಶ್ಲೇಷಿಸುವುದೇ ಅಧ್ಯಯನದ ಸ್ವರೂಪವಾಗಿದೆ. ಈ ಸಂಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಐದು ಅಧ್ಯಾಯಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ಈ ಅಧ್ಯಾಯಗಳಲ್ಲಿ ಉಪಶೀರ್ಷಿಕೆಗಳು ಇವೆ. ಹೀಗೆ ಪ್ರಸ್ತುತ ಅಧ್ಯಯನವು ಬೃಹತ್ ಶಿಲಾಯುಗ ಸಂಸ್ಕೃತಿಯನ್ನು ಕುರಿತದ್ದಾಗಿದೆ.

ಮೊದಲನೇ ಅಧ್ಯಾಯದಲ್ಲಿ ಪ್ರಸ್ತಾವನೆಯೊಂದಿಗೆ ಅಧ್ಯಯನದ ಉದ್ದೇಶ, ವ್ಯಾಪ್ತಿ, ಹಾಗೂ ಅಧ್ಯಯನಕ್ಕೆ ಬಳಸಿಕೊಂಡಿರುವ ವಿಧಿ ವಿಧಾನಗಳು, ಈವರೆಗೆ ನಡೆದಿರುವ ಅಧ್ಯಯನ ಸಮೀಕ್ಷೆ ಮತ್ತು ಸ್ವರೂಪವನ್ನು ಚರ್ಚಿಸಲಾಗಿ.

ಎರಡನೇ ಅಧ್ಯಯದಲ್ಲಿ ಭೌಗೋಳಿಕ ಅಂಶಗಳನ್ನು ಗಮನಿಸಲಾಗುವುದು. ಪ್ರಸ್ತುತ ಕೂಡ್ಲಿಗಿ ತಾಲ್ಲೂಕು ಅದರ ಸುತ್ತಮುತ್ತಲಿನ ಪ್ರದೇಶದ ಭೌಗೋಳಿಕ ಲಕ್ಷಣಗಳು, ಹವಮಾನ, ಶಿಲೆಗಳು, ಖನಿಜಗಳ, ಮಣ್ಣಿನ ಮಾದರಿ, ಮಳೆಯ ಪ್ರಮಾಣ ನದಿ–ಹಳ್ಳಗಳು, ಬೆಟ್ಟಗಳು ಮತ್ತು ಬೆಳೆಗಳ ಬೆಗೆಗೆ ವಿವರಿಸಲಾಗಿದೆ. ಅಲ್ಲದೆ ಸ್ಥಳನಾಮದ ಜೊತೆಗೆ ಈ ಎಲ್ಲಾ ಭೌಗೋಳಿಕ ಪರಿಸರದ ಅಧ್ಯಯನ ಪ್ರದೇಶದಲ್ಲಿ ಆದಿ ಮಾನವನ ಜೀವನ ಕ್ರಮಕ್ಕೆ ಅನುಕೂಲಕರವಾಗಿತ್ತೆ? ಅಥವಾ ಪ್ರತಿಕೂಲಕರವಾಗಿತ್ತೆ? ಎಂಬುದನ್ನು ಸಹ ಚರ್ಚಿಸಲಾಗಿದೆ. ಹಾಗೂ ಈ ಪ್ರದೇಶದಲ್ಲಿ ಕಂಡುಬರುವ ಶಿಲಾಯುಗದ ಮಾನವನ ನೆಲೆಗಳು, ಅಲ್ಲಿ ದೊರೆತ ಅವಶೇಷಗಳನ್ನು ಕುರಿತು ವಿಶ್ಲೇಷಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿ ಅರ್ಥ ಹಾಗೂ ಇತರೆ ಪ್ರದೇಶಗಳಲ್ಲಿ ಕಂಡುಬಂದಿರುವ ಬೃಹತ್ ಶಿಲಾಯುಗದ ನೆಲೆಗಳು ಮತ್ತು ಪ್ರಸ್ತುತ ಅಧ್ಯಯನ ಪ್ರದೇಶವಾದ ಕೂಡ್ಲಿಗಿ ತಾಲೂಕಿನಲ್ಲಿ ಕಂಡುಬಂದಿರವ ಅವುಗಳ ನೆಲೆಗಳು ಸ್ವರೂಪ ಮತ್ತು ಮಹತ್ವವನ್ನು ಕುರಿತು ತಿಳಿಸಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಕೂಡ್ಲಿಗಿ ತಾಲ್ಲೂಕಿನ ಬೃಹತ್ ಶಿಲಾಯುಗದ ನೆಲೆಗಳಲ್ಲಿ ದೊರೆಯಬಹುದಾದ ಕುರುಹು ಅಥವಾ ಅವಶೇಷಗಳನ್ನು ವ್ಯವಸ್ಥಿತವಾಗಿ ಅಧ್ಯಯನ ನಡೆಸಿ ವಿಶ್ಲೇಷಿಸಲಾಗಿದೆ. ಅವುಗಳು ಒಳಗೊಂಡಿರುವ ವಿವರಗಳು ಮುಂತಾದವುಗಳ ಸಮಗ್ರ ಚಿತ್ರಣವನ್ನು ಹಾಗೂ ಬೃಹತ್ ಶಿಲಾಯುಗ ಸಂಸ್ಕೃತಿಯು ಪಸರಿಸುವಿಕೆ ಯಲ್ಲಾದ ಬದಲಾವಣೆ ಅವುಗಳ ವಿಸ್ತಾರ ಕುರಿತಾದ ವಿವರವನ್ನು ಈ ಅಧ್ಯಯದಲ್ಲಿ ನೀಡಲಾಗಿದೆ.

ಕೊನೆಯ ಅಥವಾ ಐದನೇ ಅಧ್ಯಾಯವು ಸಮಾರೋಪವಾಗಿದ್ದು ಅಧ್ಯಯನದ ಫಲಿತಗಳು ಕಂಡುಕೊಳ್ಳುವ ಹೊಸ ವಿಚಾರಗಳು ಹಾಗೂ ಇಡೀ ಅಧ್ಯಯನದ ಸಂಕ್ಷಿಪ್ತರೂಪವಾಗಿದೆ. ಅಧ್ಯಯನಕ್ಕೆ ಪೂರಕವಾದ ಪರಾಮರ್ಶನ ಗ್ರಂಥಗಳು, ಕೋಷ್ಟಕ, ನಕ್ಷೆಗಳು, ಹಾಗೂ ಛಾಯಾಚಿತ್ರಗಳನ್ನು ಅನುಬಂಧದಲ್ಲಿ ತೋರಿಸಲಾಗಿದೆ. ಹೀಗೆ "ಕೂಡ್ಲಿಗಿ ತಾಲ್ಲೂಕಿನ ಬೃಹತ ಶಿಲಾಯುಗದ ನೆಲೆಗಳ" ಸಮಗ್ರ ಚಿತ್ರಣವನ್ನು ಈ ಮೇಲಿನ ಅಧ್ಯಾಯಗಳಲ್ಲಿ ಸಂಯೋಜಿಸಲಾಗಿದೆ.

## ಅಡಿ ಟಿಪ್ಪಣಿಗಳು

೧. ಬಳ್ಳಾರಿ ಜಿಲ್ಲಾ ಗೆಜೆಟಿಯರ್, ಪು.ಸಂ,೧೯-೨೩

೨. ಲೀಲಾ ಎಸ್.ಎಸ್., ಜೀವವಿಕಾಸ, ಪು.ಸಂ,೬೨

೩. ತಿಪ್ಪೇಸ್ವಾಮಿ ಹೆಚ್., ಕೂಡ್ಲಿಗಿ ತಾಲೂಕಿನ ಪ್ರಾಗೈತಿಹಾಸಿಕ ನೆಲೆಗಳು ಇತಿಹಾಸ ದರ್ಶನ ಸಂ.೧೬, ಪು.ಸಂ,೧-೨

೪. ಶಿವತಾರಕ್ ಕೆ.ಬಿ., ಕರ್ನಾಟಕ ಪುರಾತತ್ವ ನೆಲೆಗಳು, ಪು.ಸಂ,೩೭೨

೫. ಚಂದ್ರಶೇಖರಯ್ಯ ಬಿ.ಎಂ., ಕೂಡ್ಲಿಗಿ ತಾಲೂಕು ದರ್ಶನ, ಪು.ಸಂ,೧

೬. ಸುಂದರ ಅ., ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ, ಪು.ಸಂ,೬೮

೭. ಚಂದ್ರಶೇಖರಯ್ಯ ಬಿ.ಎಂ., ಪೂರ್ವೋಕ್ತ, ಪು.ಸಂ,೬

೮. ತಿಪ್ಪೇಸ್ವಾಮಿ ಹೆಚ್., ಪೂರ್ವೋಕ್ತ, ಪು.ಸಂ,೧-೨

೯. ಅದೇ, ಕೂಡ್ಲಿಗಿ ತಾಲೂಕಿನ ಮಾನವಾಕೃತಿಗಳು, ಇತಿಹಾಸ ದರ್ಶನ, ಸಂ.೧೪, ಪು.ಸಂ,೨೦

೧೦. ರವಿ ಕುಮಾರ ಎನ್.ಎಮ್., ಮತ್ತು ವೃಷಭೇಂದ್ರಚಾರ್ಯ, ಮುನ್ನಡೆಯಲ್ಲಿ ಕೂಡ್ಲಿಗಿ ಪು.ಸಂ,೧

೧೧. ಶಿವತಾರಕ್ ಕೆ.ಬಿ., ಪೂರ್ವೋಕ್ತ, ಪು.ಸಂ,೩೫೨-೩೫೪

೧೨. ವಿರೂಪಾಕ್ಷಿ ಪೂಜಾರಹಳ್ಳಿ, ಚಿನ್ನಹಗರಿಸಿರಿ, ಪು.ಸಂ,೩

೧೩. ಶ್ರೀನಿವಾಸ ಎಲ್., ಹಂಪಿ ಪರಿಸರದ ಆದಿ ಮಾನವನ ನೆಲೆಗಳು, ಪು.ಸಂ,೫೯

೧೪. ವಾಸುದೇವ ಬಡಿಗೇರ, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ, ಪು.ಸಂ,೧೭

೧೫. ಉಜ್ಜನಿ ರುದ್ರಪ್ಪ, ಕೌತುಕ, ಪು.ಸಂ,೮

೧೬. ಭೀಮಣ್ಣ ಗಜಾಪುರ, ಕನಸ್ಸುಗಳಿಗೆ ರೆಕ್ಕೆ ಕಟ್ಟಿದವರು, ಪು.ಸಂ, ೧೧

## ಅಧ್ಯಾಯ ಎರಡು

# ಭೌಗೋಳಿಕ ಪರಿಸರ ಮತ್ತು ಪ್ರಾಗೈತಿಹಾಸಿಕ ಹಿನ್ನೆಲೆ

---

೨.೧. ಭೌಗೋಳಿಕ ಪರಿಸರ

೨.೨. ಸ್ಥಳನಾಮ

೨.೩. ಪ್ರಾಗೈತಿಹಾಸಿಕ ಹಿನ್ನೆಲೆ

# ಅಧ್ಯಾಯ ಎರಡು

## ಕೂಡ್ಲಿಗಿ ತಾಲೂಕಿನ ಭೌಗೋಳಿಕತೆ ಮತ್ತು ಪ್ರಾಗೈತಿಹಾಸಿಕ ಹಿನ್ನೆಲೆ

ಪ್ರಪಂಚದ ಪ್ರತಿಯೊಂದು ರಾಷ್ಟ್ರ ಹಾಗೂ ಜನಸಮುದಾಯಗಳ ಮೇಲೆ ಭೌಗೋಳಿಕ ಪರಿಸರವು ತನ್ನದೇ ಆದ ಪ್ರಭಾವ ಬೀರಿದೆ. ಮಾನವನ ಜೀವನ ವೃತ್ತಾಂತಕ್ಕೂ ಮತ್ತು ಆತನು ವಾಸಿಸುವ ಪರಿಸರಕ್ಕೂ ನಿಕಟ ಸಂಬಂಧವಿದೆ. ಆದ್ದರಿಂದ ಮಾನವನ ಚರಿತ್ರೆಯನ್ನು ತಿಳಿಯಲು ಭೌಗೋಳಿಕ ಪರಿಸರದ ಜ್ಞಾನ ಅತ್ಯವಶ್ಯಕವೆನ್ನಿಸುತ್ತದೆ. ಮಾನವನ ಇತಿಹಾಸವು ಆಯಾ ಪ್ರದೇಶಗಳ ಸ್ವಾಭಾವಿಕ ವಾತಾವರಣವನ್ನು ಅವಲಂಬಿಸಿರುತ್ತದೆ. ಮತ್ತು ಅವುಗಳು ಚರಿತ್ರೆಯ ಬರವಣಿಗೆಯಲ್ಲಿ ಸಹಕಾರಿಯಾಗಿವೆ. ಭೌಗೋಳಿಕ ಅಂಶಗಳ ಪರಿಜ್ಞಾನವಿಲ್ಲದೆ ಇತಿಹಾಸ ರಚಿಸುವುದು ಕಷ್ಟಸಾಧ್ಯ, ಆದ್ದರಿಂದ ಭೌಗೋಳಿಕ ಪ್ರದೇಶದ ಸನ್ನಿವೇಶಗಳನ್ನು ತಿಳಿಯಲು ಆ ಪ್ರದೇಶದ ಫಲವತ್ತಾದ ಮಣ್ಣು (ಭೂ ಪ್ರದೇಶ) ಸ್ವಾಭಾವಿಕ ಸಸ್ಯವರ್ಗ, ಪ್ರಾಣಿವರ್ಗ, ಹವಾಗುಣ, ಖನಿಜ ಸಂಪತ್ತು, ನದಿಮೂಲ, ಅರಣ್ಯ ತೀರಪ್ರದೇಶ, ಕಣಿವೆ, ಪರ್ವತ ಪ್ರದೇಶಗಳೆಂಬ ಮೊದಲಾದ ಅಂಶಗಳನ್ನು ಗಮನಿಸಲಾಗುವುದು. ಈ ನಿಟ್ಟಿನಲ್ಲಿ ಕೂಡ್ಲಿಗಿ ಪರಿಸರದ ಭೌಗೋಳಿಕ ಅಂಶಗಳನ್ನು ಕೆಳಕಂಡಂತೆ ವಿವೇಚಿಸಲಾಗುವುದು.

### ೨.೧. ಭೌಗೋಳಿಕ ಪರಿಸರ

ಬಳ್ಳಾರಿ ಜಿಲ್ಲೆಯ ಏಳು ತಾಲೂಕುಗಳಲ್ಲಿ ಒಂದಾಗಿರುವ ಕೂಡ್ಲಿಗಿಯು ಜಿಲ್ಲೆಯ ಹೊಸಪೇಟೆ ಉಪಭಾಗಕ್ಕೆ ಸೇರಿದೆ. ಜಿಲ್ಲಾ ಕೇಂದ್ರ ಸ್ಥಾನದಿಂದ ನೈರುತ್ಯ ದಿಕ್ಕಿಗೆ ೮೦.ಕಿ.ಮೀ ದೂರದಲ್ಲಿರುವ ಈ ತಾಲೂಕು ಜಿಲ್ಲೆಯ ಎರಡನೆಯ ಅತಿ ದೊಡ್ಡ ತಾಲೂಕು ಎಂದೆನಿಸಿದೆ. ತಾಲೂಕಿನ ಉತ್ತರದಲ್ಲಿ ಹಗರಿಬೊಮ್ಮನಹಳ್ಳಿ, ಹೊಸಪೇಟೆ, ಸಂಡೂರು, ಪಶ್ಚಿಮದಲ್ಲಿ ಹರಪನಹಳ್ಳಿ, ಪೂರ್ವ ಮತ್ತು ದಕ್ಷಿಣ ದಿಕ್ಕುಗಳಲ್ಲಿ ಕ್ರಮವಾಗಿ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ಮತ್ತು ದಾವಣಗೆರೆ ಜಿಲ್ಲೆಯ ಜಗಳೂರು ತಾಲೂಕುಗಳನ್ನು ಮೇರೆಗಳಾಗಿ ಹೊಂದಿದೆ.

ಭೌಗೋಳಿಕವಾಗಿ ಈ ತಾಲೂಕು ಕೇಂದ್ರದ ಸ್ಥೂಲವಾಗಿ ಪೂರ್ವ ರೇಖಾಂಶ ೭೬° ೨೫-೭೬ ೮೫ ಮತ್ತು ಉತ್ತರ ಅಕ್ಷಾಂಶ ೧೪° ೩೩-೧೫ಳ ನಡುವೆ ಹರಡಿಕೊಂಡಿದೆ. ತಾಲೂಕಿನ ಒಟ್ಟು ಭೂವಿಸ್ತೀರ್ಣ ೧೫೯.೭೦೬ ಹೆಕ್ಟೇರ್ ಪ್ರದೇಶವಾಗಿದ್ದು, ಇದರಲ್ಲಿ ೯೨.೬೮೯ ಹೆಕ್ಟೇರ್ ಪ್ರದೇಶ ಮಾತ್ರ ವ್ಯವಸಾಯಕ್ಕೆ ಯೋಗ್ಯವಾಗಿದೆ ಎಂದು ವ್ಯವಸಾಯ ಇಲಾಖೆಯ ಅಂಕಿ

ಅಂಶಗಳ ಮಾಹಿತಿಯಿಂದ ತಿಳಿದುಬರುತ್ತದೆ.[೧] ಈ ತಾಲೂಕನ್ನು ಆಡಳಿತದ ಅನುಕೂಲಕ್ಕಾಗಿ ಕೊಟ್ಟೂರು, ಕೂಡ್ಲಿಗಿ, ಗುಡೇಕೋಟೆ ಹಾಗೂ ಹೊಸಹಳ್ಳಿ ಎಂಬ ನಾಲ್ಕು ಹೋಬಳಿಗಳನ್ನಾಗಿ ವಿಂಗಡಿಸಲಾಗಿದೆ. ತಾಲೂಕಿನಲ್ಲಿ ೨ ನಾಡ ಕಛೇರಿಗಳು, ೮೨ ಕಂದಾಯ ಗ್ರಾಮಗಳು, ೧೩೬ ಮಜರ್ ಗ್ರಾಮಗಳು, ೨ವಸತಿ ಗ್ರಾಮಗಳ ಮತ್ತು ೩೩ ಗ್ರಾಮ ಪಂಚಾಯಿತಿಗಳಲ್ಲಿ, ೨ ಪಟ್ಟಣ ಪಂಚಾಯಿತಿಗಳನ್ನು ಒಳಗೊಂಡಿದೆ.

೧೯೮೧ ರ ಜನಗಣತಿಯ ಪ್ರಕಾರ ೧೬೫,೬೭೯ ಜನಸಂಖ್ಯೆಯನ್ನು ಹೊಂದಿದ್ದು ಇದರಲ್ಲಿ ಪುರುಷರ ಸಂಖ್ಯೆ ೮೩,೮೩೪ ಆದರೆ ಮಹಿಳೆಯರ ಸಂಖ್ಯೆ ೮೧,೮೪೫ ರಷ್ಟಿದೆ ಅಲ್ಲದೆ ಈ ತಾಲೂಕಿನ ಲಿಂಗಾನುಪಾತ ಪ್ರತಿ ೧೦೦೦ ಪುರುಷರಿಗೆ ೯೭೬ ಸಂಖ್ಯೆ ಮಹಿಳೆಯರು ಇದ್ದಾರೆಂದು ತಿಳಿದುಬರುತ್ತದೆ ಹಾಗೂ ತಾಲೂಕಿನ ಜನ ಸಾಂದ್ರತೆಯ ಪ್ರತಿ ಚ.ಕಿ.ಮೀ. ೧೦೩ ಆಗಿತ್ತು.[೨]

೧೯೯೧ ರ ಜನಗಣತಿಯ ಪ್ರಕಾರ ಒಟ್ಟು ಜನಸಂಖ್ಯೆ ೨.೧೯೪೮ ರಷ್ಟಿದ್ದು ಇದರಲ್ಲಿ ೧,೧೧೯೪೮ ಪುರುಷರ ಸಂಖ್ಯೆ ಮತ್ತು ೧೦೭೫೩೨ ಮಹಿಳೆಯರ ಸಂಖ್ಯೆ ಕಂಡು ಬಂದಿದೆ ಇದರಿಂದ ಲಿಂಗಾನುಪಾತ ಸಂಖ್ಯೆ ಪ್ರತಿ ಸಾವಿರ ಪುರುಷರಿಗೆ ೯೬೦ ರಷ್ಟು ಮಹಿಳೆಯರು ಕಂಡುಬಂದಿದ್ದಾರೆ.[೩]

೨೦೦೧ರ ಜನಗಣತಿಯ ಪ್ರಕಾರ ಒಟ್ಟು ಜನಸಂಖ್ಯೆ ೨,೭೨,೧೮೩ ರಷ್ಟು ಕಂಡುಬಂದಿದೆ. ಆದರೆ ಇತ್ತೀಚೆಗೆ ನಡೆದ ೨೦೧೧ರ ಜನಗಣತಿ ವೇಳೆಯಲ್ಲಿ ಈ ತಾಲೂಕಿನ ಒಟ್ಟು ಜನಸಂಖ್ಯೆ ೩೦೮೯೦೧ ರಷ್ಟಿದೆ.[೪] ಮತ್ತು ಪ್ರತಿ ಚದರ ಕಿ.ಮೀ. ೧೯೨ ರಷ್ಟು ಜನಸಾಂದ್ರತೆ ಇದೆ. ಹೀಗೆ ಕೂಡ್ಲಿಗಿ ತಾಲೂಕಿನ ಜನ ಸಂಖ್ಯೆಯ ಪ್ರಮಾಣ ಕಳೆದ ಮೂರು ದಶಕಗಳಲ್ಲಿ ೧,೪೩೨೨೨ ರಷ್ಟು ಗಣನೀಯವಾಗಿ ಹೆಚ್ಚಾಗಿರುವುದು ತಿಳಿದುಬರುತ್ತದೆ.

**ಹವಾಗುಣ**

ಹವಾಗುಣವು ಶುಷ್ಕವಾದರೂ ಆರೋಗ್ಯಕರವಾಗಿದ್ದು, ಚಳಿಗಾಲದ ದಿನಗಳನ್ನು ಹೊರತುಪಡಿಸಿ ವರ್ಷಪೂರ್ತಿ ಹೆಚ್ಚು ಉಷ್ಣತೆ ಕಂಡುಬರುತ್ತದೆ. ಜೂನ್ ತಿಂಗಳಿನಿಂದ ಅಕ್ಟೋಬರ್ ತಿಂಗಳಿನವರೆಗೆ ಮುಂಗಾರು ಮಳೆಯೂ ನವಂಬರ್ ತಿಂಗಳಿನಿಂದ ಡಿಸೆಂಬರ್ ತಿಂಗಳವರೆಗೆ ಹಿಂಗಾರು ಮಳೆಯು ಬೀಳುತ್ತದೆ ಎಂಬುದು ಇಲ್ಲಿಯ ವಾಡಿಕೆ. ಇಲ್ಲಿನ ಮಳೆ ಪ್ರಮಾಣ ೬೧೭ ಮೀ.ಮೀ ಗಳಷ್ಟು ಆದರೂ ಅನಿಶ್ಚಿತವಾಗಿ ಕೆಲವೊಮ್ಮೆ ಅತೀ ವೃಷ್ಠಿಯಾಗುವುದುಂಟು. ಇಲ್ಲಿನ ವಾರ್ಷಿಕ ಮಳೆ ಪ್ರಮಾಣ ೬೬೧ ಮೀಗಳಷ್ಟು ಎಂದು ಮಳೆ ಮಾಪನ ಕೇಂದ್ರಗಳ ಮಾಹಿತಿಯಿಂದ ತಿಳಿದು ಬರುತ್ತದೆ.[೫] ತಾಲೂಕಿನಲ್ಲಿ ಒಟ್ಟು ಏಳು ಮಳೆ ಮಾಪನ ಕೇಂದ್ರಗಳು ಪ್ರಸ್ತುತವಾಗಿ ಕಾರ್ಯನಿರ್ವಹಿಸುತ್ತಿವೆ ಎಂದು ತಿಳಿದುಬರುತ್ತದೆ.

**ಬೆಟ್ಟಗಳು**

ಕರ್ನಾಟಕದ ದಖನ್ನಿನ ಉತ್ತರ ಇಳಿಜಾರಿನಲ್ಲಿರುವ ಕೂಡ್ಲಿಗಿ ತಾಲೂಕು ೨೦೦೦ ಅಡಿ ೧೫೦೨ ಅಡಿ ಎತ್ತರದಲ್ಲಿ ಈಶಾನ್ಯದ ಕಡೆಗೆ ಇಳಿಜಾರಾಗಿದೆ. ತಾಲೂಕಿನ ಬಹುಭಾಗ ಬಯಲು ಸೀಮೆಯಾದರೂ ಕುರುಚಲು ಕಾಡುಗಳಿಂದಾಗಲಿ ಬೆಟ್ಟಗುಡ್ಡಗಳಿಂದಾಗಲಿ ಕೊರತೆಯಿಲ್ಲ. ತಾಲೂಕಿನಲ್ಲಿ ಎರಡು ಬೆಟ್ಟಸಾಲುಗಳಿವೆ. ಅವುಗಳಲ್ಲಿ ಕೂಡ್ಲಿಗಿ ಬೆಟ್ಟಸಾಲು (೨೩೭೮ ಅಡಿ) ಉತ್ತರಕ್ಕೆ ಸುಮಾರು ೫ ಕಿ.ಮೀ. ದೂರದಲ್ಲಿ ಪ್ರಾರಂಭವಾಗಿ ತಾಲೂಕಿನ ಉತ್ತರ ಮತ್ತು ಪೂರ್ವದ ಕಡೆಗೆ ಹಬ್ಬಿ ಜರಿಮಲೆ ದುರ್ಗದ ಬಳಿ (೨೭೪೩ ಅಡಿ) ಕೊನೆಗೊಳ್ಳುತ್ತದೆ.[೬]

ಎರಡನೆಯ ಗುಡೇಕೋಟೆ ಬೆಟ್ಟಗಳ ಸಾಲು ಸಂಡೂರು ತಾಲೂಕಿನ ಜೋರುನೂರಿನ ಬಳಿ ಪ್ರಾರಂಭವಾಗಿ ಆಗ್ನೇಯಕ್ಕೆ ತಿರುಗಿ ಗುಡೇಕೋಟೆಯ (೨೩೦೦ಅಡಿ) ಮೂಲಕ ಹಾಯ್ದು ಚಿನ್ನ ಹಗರಿ ಕಣವೆಯನ್ನು ಪ್ರವೇಶಿಸಿ ಚಿತ್ರದುರ್ಗ ಜಿಲ್ಲೆಯಲ್ಲಿ ಕೊನೆಗೊಳ್ಳುತ್ತವೆ.

ಕೂಡ್ಲಿಗಿಯಲ್ಲಿ ಈ ಶ್ರೇಣಿಯ ೩೦೩೨ ಅಡಿ ಮತ್ತು ೨೮೦೮ ಅಡಿ ಎತ್ತರವಿರುವ ಎರಡು ಬೆಟ್ಟಗಳಿವೆ. ಇತಿಹಾಸದ ಅತ್ಯಂತ ಪ್ರಾಚೀನ ಶಿಲೆಗಳನ್ನು ಈ ತಾಲೂಕಿನಲ್ಲಿ ಕಾಣಬಹುದು. ಪಶ್ಚಿಮಾರ್ದ ಭಾಗದಲ್ಲಿ ಧಾರವಾಡ ಪದರಶಿಲೆಗಳಿವೆ. ಇವು ಒಂದರ ಮೇಲೊಂದರಂತೆ ನಾಲ್ಕು ಪದರ ಶಿಲೆಗಳಾಗಿವೆ. ಆಗ್ನೇಯದ ಸ್ವಲ್ಪ ಭಾಗದಲ್ಲಿ ಬೆಣಚುಕಲ್ಲುಗಳಿದ್ದು, ತಾಲೂಕಿನ ಕೀಕಲ ಗುಡ್ಡದಲ್ಲಿ ಪದ್ಮರಾಗ ಶಿಲೆ ದೊರಕುತ್ತದೆ. ಹಾಗೂ ತಾಲೂಕಿನ ಬಹುಭಾಗ ಬೆಣಚುಕಲ್ಲು ಮತ್ತು ಗ್ರಾನೈಟ್ ಶಿಲೆಗಳಿಂದ ಕೂಡಿದೆ. ಅದೇ ರೀತಿ ಸಿಸ್ಟ್, ಸ್ಯಾಂಡ್ ಸ್ಟೋನ್, ಜಾಸ್ಪರ್ ಮುಂತಾದ ಶಿಲೆಗಳನ್ನು ಸಹ ಕಾಣಬಹುದಾಗಿದೆ. ಇಲ್ಲಿನ ಬೈರೇದೇವರಗುಡ್ಡದಲ್ಲಿ ಗಂಧಕ ಹೇರಳವಾಗಿ ದೊರೆಯುತ್ತದೆಂದು ಹೇಳಲಾಗಿದೆ.[೭] ಆರ್ಥಿಕವಾಗಿ ಲಾಭ ತರುವಂತಹ ಯಾವುದೇ ಖನಿಜಗಳು ಇಲ್ಲಿ ದೊರೆಯುತ್ತಿಲ್ಲ ಎಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ.

**ಜಲಮೂಲಗಳು**

'ಜಲಸಂಪತ್ತು' ಪ್ರಾಕೃತಿಕ ಸಂಪತ್ತಿನಲ್ಲಿ ಪ್ರಮುಖವಾಗಿದ್ದು, ಕೂಡ್ಲಿಗಿ ತಾಲೂಕಿನಲ್ಲಿ ಹೆಸರಾಂತ ನದಿಗಳಿಲ್ಲವಾದರೂ ತುಂಗಭದ್ರೆಯ ಉಪನದಿಗಳಾದ ಚಿಕ್ಕಹಗರಿ ಮತ್ತು ಚಿನ್ನಹಗರಿ (ಜನಿಗಳ್ಳಗಳು) ಹರಿಯುತ್ತಿದ್ದು ಅಲ್ಪ ಸ್ವಲ್ಪ ನೀರಾವರಿಗೆ ನೆರವಾಗಿವೆ. ಇವುಗಳಲ್ಲಿ ಚಿತ್ರದುರ್ಗಜಿಲ್ಲೆಯಲ್ಲಿ ಹುಟ್ಟುವ ಚಿನ್ನಹಗರಿಯು ಕೂಡ್ಲಿಗಿ ತಾಲೂಕಿನ ಗಡಿ ಗ್ರಾಮವಾದ ಟಿ.ಕಲ್ಲಹಳ್ಳಿ ಸಮೀಪ ಪ್ರದೇಶಿಸಿ ಆಂಧ್ರಪ್ರದೇಶ ರಾಯದುರ್ಗ ತಾಲೂಕಿನಲ್ಲಿ ಹರಿಯುವ ವೇದಾವತಿಯನ್ನು ಸೇರುತ್ತದೆ.[೮] ಈ ಉಪನದಿಗೆ ತಾಲೂಕಿನ ಗಡಿ ಭಾಗದಲ್ಲಿರುವ ಹುರುಡಿಹಳ್ಳಿ ಸಮೀಪ ಮೊಳಕಾಲ್ಮೂರು ತಾಲೂಕಿನ ಪ್ರದೇಶದಲ್ಲಿ ನದಿಗೆ ಅಡ್ಡಲಾಗಿ ರಂಗಯ್ಯನ ದುರ್ಗ ಜಲಾಶಯವನ್ನು ನಿರ್ಮಿಸಲಾಗಿದೆ.

ಎರಡನೆಯ ಉಪನದಿಯಾದ ಚಿಕ್ಕ ಹಗರಿಯು ಸಹ ಚಿತ್ರದುರ್ಗ ಜಿಲ್ಲೆಯಲ್ಲಿ ಉಗಮವಾಗಿ ತಾಲೂಕಿನ ಪಶ್ಚಿಮ ಗಡಿಯಲ್ಲಿ ಹಾಯ್ದು ಹರಪನಹಳ್ಳಿ, ಹಗರಿಬೊಮ್ಮನ ಹಳ್ಳಿ ತಾಲೂಕುಗಳನ್ನು

ಪ್ರವೇಶಿಸಿ ತುಂತಭದ್ರೆಯ ಹಿನ್ನೀರಿನಲ್ಲಿ ಸೇರುತ್ತದೆ. ಈ ಎರಡು ನದಿಗಳು ಮಳೆಯನ್ನಾಧಿರಿಸಿವೆ ತಾಲೂಕಿನಲ್ಲಿ ಒಟ್ಟು ೭೩ ಕೆರೆಗಳಿದ್ದು ಅವುಗಳಲ್ಲಿ ಹತ್ತು ದೊಡ್ಡ ಕೆರೆಗಳು ಹಾಗೂ ಹಲವು ಬಾವಿಗಳು ಕಂಡುಬಂದಿವೆ. ತಾಲೂಕಿನ ಗಂಡ ಬೊಮ್ಮನಹಳ್ಳಿ ಕೆರೆಯು ಅತಿದೊಡ್ಡ ಕೆರೆ ಎನಿಸಿದೆ. ಇವುಗಳಲ್ಲದೆ ಗೋಕಟ್ಟೆಗಳು ಸಣ್ಣ ಪುಟ್ಟ ಹಳ್ಳಗಳಿದ್ದು ಇವುಗಳು ಮಳೆಯಿಂದಾಗಿ ತುಂಬಿ ಕೊಳ್ಳುತ್ತವೆ. ಒಟ್ಟಿನಲ್ಲಿ ತಾಲೂಕಿನ ನೀರಾವರಿ ಪ್ರದೇಶವು ೩೩.೪೩೬ ಹೆಕ್ಟೇರ್ ಇದ್ದು, ಇಲ್ಲಿನ ಜನರಿಗೂ, ಪ್ರಾಣಿಪಕ್ಷಿಗಳಿಗೂ, ಜಲ ಸಂಪತ್ತು (ಜಲಮೂಲ) ವರದಾನವಾಗಿದೆ.[೯] ಕೃಷಿ ಇಲಾಖೆಯವರು ಮಳೆ ಮಾಪನ ಕೇಂದ್ರದ ಮಾಹಿತಿಯ ಪ್ರಕಾರ ವರ್ಷದಿಂದ ವರ್ಷಕ್ಕೆ ಪರಿಸರ ನಾಶವಾಗುತ್ತಿರುವುದರಿಂದ ಮಳೆ ಪ್ರಮಾಣ ಇಲ್ಲಿ ಕಡಿಮೆಯಾಗುತ್ತಾ ಬಂದಿರುವುದನ್ನು ಕಾಣಬಹುದು.

## ಮಣ್ಣಿನ ಮಾದರಿ ಮತ್ತು ಬೆಳೆಗಳು

ನೈಸರ್ಗಿಕವಾಗಿ ಇಲ್ಲಿ ನೆಲ ಕೆಂಪು ಮತ್ತು ಮಸಾರಿ ಅಥವಾ ಬಿಳಿಕೆಂಪು ಮಿಶ್ರವಾದ ಮಣ್ಣಾಗಿದ್ದು, ಗ್ರಾನೈಟ್ ಶಿಲೆ ಪೃಥಕರಣದಿಂದ ಉಂಟಾದ ಈ ಮಣ್ಣು (ಕಪ್ಪು ಎರೆಮಣ್ಣು) ಮರಳಿನ ರೂಪದಲ್ಲಿದೆ. ಮತ್ತು ಮೂರನೆಯ ಒಂದು ಭಾಗ ಮಾತ್ರ ಮಿಶ್ರ ಮಣ್ಣನ್ನು ಹೊಂದಿದೆ.[೧೦] ಈ ಮಣ್ಣಿನಲ್ಲಿ ಜೋಳ, ಸಜ್ಜೆ, ನವಣೆ, ರಾಗಿ, ಭತ್ತ, ನೆಲಗಡಲೆ ಮುಂತಾದ ಆಹಾರದ ಬೆಳೆಗಳನ್ನು ಬೆಳೆಯಲಾಗುತ್ತದೆ.

ಕಪ್ಪು ಮಣ್ಣಿನಲ್ಲಿ ಬಸಲ್ಟ್ ಶಿಲೆಯ ಶಿಥಲೀಕರಣದಿಂದಾಗಿ ಇದರಲ್ಲಿ ಹೆಚ್ಚು ಮೆಗ್ನೇಶಿಯಂ, ಅಲ್ಯೂಮಿನಿಯಂ ಮತ್ತು ಕಬ್ಬಿಣದ ಆಕ್ಸೈಡ್‌ಗಳಾಗಿರುತ್ತವೆ. ಈ ಮಣ್ಣಿನಲ್ಲಿ ಹತ್ತಿ, ಸೂರ್ಯಕಾಂತಿ, ಈರುಳ್ಳಿ, ಮೆಣಸಿನಕಾಯಿ ಇನ್ನಿತರ ವಾಣಿಜ್ಯ ಬೆಳೆಗಳನ್ನಾಗಿ ಬೆಳೆಯಲಾಗುತ್ತದೆ. ಹಾಗೂ ಹೆಸರು, ತೊಗರಿ, ಈರುಳ್ಳಿ ಮುಂತಾದ ದವಸ ದಾನ್ಯಗಳನ್ನು ಸಹ ಈ ತಾಲ್ಲೂಕಿನಲ್ಲಿ ಬೆಳೆಯಲಾಗುತ್ತದೆ.

## ಅರಣ್ಯ ಸಂಪತ್ತು

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನ ಪ್ರಕೃತಿ ಸೌಂದರ್ಯ ಅತಿಶಯವಾದದ್ದು. ಉತ್ತರದಲ್ಲೂ, ಪೂರ್ವ ಮಧ್ಯಗಳಲ್ಲೂ ಕಾಡುಗಳುಂಟು ಇತ್ತೀಚೆಗೆ ಅರಣ್ಯದ ಬಹುಪಾಲು ಅಳಿದು ಕೃಷಿ ಭೂಮಿಯಾಗಿ ಮಾರ್ಪಟ್ಟಿದೆ. ದೇಶದ ತಾಲೂಕುಗಳ ಮಟ್ಟಿಗೆ ಹೆಚ್ಚು ಅರಣ್ಯ ಭೂ ಪ್ರದೇಶ ಹೊಂದಿದ ತಾಲೂಕು ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಈ ತಾಲೂಕಿನ ಅರಣ್ಯ ಪ್ರದೇಶದ ಒಟ್ಟು ವಿಸ್ತೀರ್ಣ ೩೩.೬೬೧ ರಷ್ಟಿದೆ. ಬೈರೇದೇವರಗುಡ್ಡ, ಗುಡೇಕೋಟೆ ಮುಂತಾದ ಬೆಟ್ಟಗಳ ಸುತ್ತ ಮುತ್ತ ಪ್ರಸಿದ್ದ ಅರಣ್ಯ ಸಂಪತ್ತಿದೆ.[೧೧] ಉಳಿದ ಕಡೆ ಅರಣ್ಯ ಎಂದರೆ, ಹೆಚ್ಚಾಗಿ ಕರಡದ ಹುಲ್ಲು ಕುರುಚಲು ಗಿಡಗಳಾದ ತಂಗಡಿ, ಎಕ್ಕೆ ಜಾಲಿ, ಪಿಜ್ಜಾಲಿ, ಸಸ್ಯಗಳ ಪೊದೆಗಳನ್ನು ತಾಲೂಕಿನ ಎಲ್ಲೆಡೆಯೂ ಕಾಣಬಹುದು. ಹಾಗೂ ದಿಂಡಿಗ, ತುಮರಿ, ಬೇವು, ಹುಣಸೆ, ನೀಲಗಿರಿ

ಮರಗಳು ಸಹ ಅಲ್ಲಲ್ಲಿ ಕಂಡುಬರುತ್ತವೆ. ಈ ಗ್ರಾಮದ ಸುತ್ತ ಮುತ್ತ ಮಾವು, ತೆಂಗು, ಅಡಿಕೆ ಮರಗಳನ್ನು ಅಲ್ಪ ಪ್ರಮಾಣದಲ್ಲಿ ಕಾಣಬಹುದು. ಈ ರೀತಿಯ ಗಿಡ ಮರಗಳನ್ನು ಅವಲಂಬಿಸುವ ಪ್ರಾಣಿ ಪಕ್ಷಿಗಳಾದ ಮೊಲ, ಜಿಂಕೆಯಂತಹ ಸಣ್ಣ ಸಸ್ತನಿ ಪ್ರಾಣಿಗಳ ಜೊತೆಗೆ ಕಾಡು, ಬೆಟ್ಟಗಳಲ್ಲಿ ಚಿರತೆ, ಕರಡಿ, ಕಾಡುಹಂದಿ, ಮುಳ್ಳುಹಂದಿ, ನರಿ, ಉಡ, ತೋಳ, ಮಂಗ, ಮೊದಲಾದ ಕಾಡುಪ್ರಾಣಿಗಳನ್ನು ಹಾಗೂ ನವಿಲು, ಕೋಗಿಲೆ, ರತ್ನಪಕ್ಷಿ, ಗಿಳಿ, ಕಾಗೆ ಗುಬ್ಬಿ, ನೀರುಕೋಳಿ, ಕೌಜುಗ, ಗೂಬೆ, ಕಿಂಗ್‌ಫಿಶರ್ ಮುಂತಾದ ನೂರಾರು ಜಾತಿಯ ಪಕ್ಷಿಗಳು ಮತ್ತು ವಿವಿಧ ಜಾತಿಯ ಹಾವುಗಳು ನಮ್ಮ ಕಣ್ಣಿಗೆ ಗೋಚರಿಸಿದ ಜೀವ ವೈವಿಧ್ಯಗಳನ್ನು ಹೊಂದಿರುವುದರಿಂದ ಈ ಪ್ರದೇಶ ವಿಶೇಷವೆನಿಸಿದೆ.

ಈ ತಾಲೂಕಿನ ಗುಡೆಕೋಟೆ ಅರಣ್ಯ ಪ್ರದೇಶದಲ್ಲಿ ಕರಡಿಗಳು ಹೆಚ್ಚಾಗಿ ಕಂಡುಬರುವುದರಿಂದ ಇತ್ತೀಚೆಗೆ ಇವುಗಳ ರಕ್ಷಣೆಗಾಗಿ ಕರಡಿದಾಮವನ್ನು ನಿರ್ಮಾಣ ಮಾಡಲಾಗಿದೆ. ಇದರಿಂದ ಏಷ್ಯಾ ಖಂಡದಲ್ಲಿಯೇ ಎರಡನೆಯ ಕರಡಿ ಧಾಮವನ್ನು ಹೊಂದಿರುವ ಹೆಗ್ಗಳಿಕೆ ಕೂಡ್ಲಿಗಿ ತಾಲೂಕು ಪರಿಸರವಾಗಿದೆ. ದಖನ್ ಪ್ರಸ್ಥಭೂಮಿಗೆ ಸೇರಿದ ಕೂಡ್ಲಿಗಿ ತಾಲೂಕು ಭೌಗೋಳಿಕವಾಗಿ ಆಯಕಟ್ಟಿನ ಭಾಗದಲ್ಲಿದ್ದು ಇಲ್ಲಿನ ಪರಿಸರವು ಮಾನವನ ವಾಸಕ್ಕೆ ಯೋಗ್ಯವಾದ ನೆಲೆಯಾಗಿತ್ತು ಎಂಬುದನ್ನು ಈ ಅಧ್ಯಯನದಿಂದ ತಿಳಿಯಬಹುದಾಗಿದೆ. ಹೀಗೆ ಪ್ರಾಗ್ಯೆತಿಹಾಸಿಕ ಕಾಲದಿಂದಲೂ ಮಾನವನ ಜೀವನೋಪಾಯ ಚಟುವಟಿಕೆಗಳು ಈ ಪ್ರದೇಶದಲ್ಲಿ ಆರಂಭವಾಗಿರುವುದನ್ನು ಗುರುತಿಸಲಾಗಿದೆ.

**ಜನವರ್ಗ ಆರ್ಥಿಕ ಸ್ಥಿತಿಗತಿ**

ಕೂಡ್ಲಿಗಿ ತಾಲೂಕಿನಲ್ಲಿ ಹಿಂದೂ, ಮುಸ್ಲಿಂ, ಕ್ರೈಸ್ತ ಧರ್ಮದವರು ಕಂಡುಬರುತ್ತಾರೆ. ಹಿಂದೂಗಳು ಹೆಚ್ಚಾಗಿ ಕಂಡುಬಂದಿದ್ದು ಮುಸ್ಲಿಂ, ಕ್ರೈಸ್ತ ಧರ್ಮದವರು ಅಲ್ಪ ಸಂಖ್ಯಾತರಾಗಿದ್ದಾರೆ.

ಹಿಂದುಗಳಲ್ಲಿ ಬಹುಸಂಖ್ಯಾತರಾಗಿ ಲಿಂಗಾಯತರು ಪ್ರಮುಖರಾಗಿದ್ದು, ಇವರಲ್ಲಿ ಗಾಣಿಗ, ಸಾದರ, ನೇಕಾರ, ಕುಡಿ ಒಕ್ಕಲಿಗ, ರೆಡ್ಡಿ ಮೊದಲಾದ ಒಳಪಂಗಡಗಳಿವೆ. ನಂತರ ಸ್ಥಾನದಲ್ಲಿ ಕುರುಬ ಜನಾಂಗದವರು ಕಂಡುಬರುತ್ತಾರೆ. ಕುರಿ ಸಾಕಣಿಕೆ, ಕಂಬಳಿ ನೇಯ್ಗೆ ಮತ್ತು ಬೇಸಾಯ ವೃತ್ತಿಯನ್ನು ಅವಲಂಭಿಸಿ ಆರ್ಥಿಕವಾಗಿ ಸುಸ್ಥಿತಿಯಲ್ಲಿದ್ದಾರೆ. ಇವರ ನಂತರ ಸ್ಥಾನದಲ್ಲಿ ನಾಯಕ ಜನಾಂಗದವರು ಕಂಡುಬರುತ್ತಾರೆ. ತಾಲೂಕಿನ ಪೂರ್ವ ಭಾಗಗಳಲ್ಲಿ ಈ ಜನಾಂಗವು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಜರಿಮಲೆ ಪಾಳೆಯಗಾರರು ಮತ್ತು ಗುಡೇಕೋಟೆ ಪಾಳೆಯಗಾರರು ಇದೇ ಜನಾಂಗಕ್ಕೆ ಸೇರಿದವರಾಗಿದ್ದಾರೆ. ಈ ಜನಾಂಗದವರು ಇಂದು ಕೃಷಿ ಮತ್ತು ಕೂಲಿಕೆಲಸಗಾರರಾಗಿ ಬದುಕುತ್ತಿದ್ದಾರೆ. ಗೊಲ್ಲ, ಒಡ್ಡ, ಈಡಿಗ, ಲಂಬಾಣಿ, ಬೆಸ್ತ, ಉಪ್ಪಾರ ಮೊದಲಾದ ಜನಾಂಗದವರು ಈ ತಾಲೂಕಿನಲ್ಲಿ ವಾಸವಾಗಿದ್ದಾರೆ. ಹರಿಜನರು ಬಹುಸಂಖ್ಯಾತ ಜನಾಂಗದವರಾಗಿದ್ದು, ಈ ಜನರು ಕೃಷಿ ಕಾರ್ಮಿಕರಾಗಿ ಮತ್ತು ಕೆಲವರು ಚಮ್ಮಾರಿಕೆ ವೃತ್ತಿಯನ್ನು

ಅವಲಂಬಿಸಿದ್ದಾರೆ. ಮತ್ತು ಆರ್ಥಿಕವಾಗಿ ಹಿಂದುಳಿದಿದ್ದು ಇತ್ತೀಚೆಗೆ ಮಕ್ಕಳಿಗೆ ಶಿಕ್ಷಣ ಕೊಡಿಸಲು ಮುಂದಾಗಿದ್ದಾರೆ. ಊರಿಗೆ ಒಂದೋ ಎರಡೋ ಎನ್ನುವಂತೆ ಬ್ರಾಹ್ಮಣ ಕುಟುಂಬಗಳು ತಾಲೂಕಿನಲ್ಲಿ ಕಂಡು ಬರುತ್ತವೆ. ಆರ್ಥಿಕ ದೃಷ್ಟಿಯಿಂದ ಕೂಡ್ಲಿಗಿ ತಾಲೂಕು ತುಂಬಾ ಶೋಚನೀಯ ಸ್ಥಿತಿಯಲ್ಲಿದೆ. ಈ ತಾಲೂಕಿನಲ್ಲಿ ಯಾವುದೇ ರೀತಿಯ ಖನಿಜ ಸಂಪನ್ಮೂಲಗಳು ದೊರೆಯದ ಕಾರಣ ಜನರ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವಂತಹ ದೊಡ್ಡ ಪ್ರಮಾಣದ ಕೈಗಾರಿಕೆಗಳು, ಉದ್ಯಮಗಳು ಕಂಡುಬರುವುದಿಲ್ಲ. ಬಹುತೇಕವಾಗಿ ಇಲ್ಲಿನ ಜನರ ಯಾವುದೇ ರೀತಿಯ ನೀರಾವರಿಯ ಅನುಕೂಲವಿಲ್ಲದೆ ಕೇವಲ ಮಳೆಯನ್ನೇ ಅವಲಂಬಿಸಿ ವ್ಯವಸಾಯ ಮಾಡುವ ಜನವರ್ಗ ಹೆಚ್ಚಿನ ಪ್ರಮಾಣದಲ್ಲಿದೆ. ಭೂಮಿಯ ಶೇ ೭೫ ರಷ್ಟು ಭಾಗ ಒಣ ಬೇಸಾಯಕ್ಕೆ ಒಳಪಟ್ಟಿದೆ. ಉಳಿದ ಭಾಗ ಮಾತ್ರ ಕೆರೆ, ಭಾವಿ, ಕಾಲುವೆಗಳ ನೀರಾವರಿಗೆ ಒಳಪಟ್ಟಿದೆ. ಎಂದು ಹೇಳಬಹುದು ಮಧ್ಯಮ ವರ್ಗದ ಜನರು ಪಶುಸಂಗೋಪನೆ, ಮೀನುಗಾರಿಗೆ ವೃತ್ತಿಯನ್ನು ಅವಲಂಬಿಸಿದ್ದಾರೆ. ಉಳುಮೆಗೆ ಎತ್ತುಗಳು, ಹೈನುಗಾರಿಕೆಗೆ ಹಸುಗಳು ಮತ್ತು ಎಮ್ಮೆಗಳನ್ನು ಸಾಕುತ್ತಿದ್ದಾರೆ. ಈ ಜಾನುವಾರುಗಳ ಆರೋಗ್ಯ ರಕ್ಷಣೆ ಮತ್ತು ತಳಿ ಅಭಿವೃದ್ಧಿಗೆ ಶ್ರಮಿಸಲು ತಾಲೂಕಿನಲ್ಲಿ ಎಂಟು ಪಶುವೈದ್ಯ ಶಾಲೆಗಳು ಕಾರ್ಯ ನಿರ್ವಹಿಸುತ್ತಿವೆ.

ಕೊಟ್ಟೂರಿನಲ್ಲಿ ಮಾತ್ರ ಎಣ್ಣೆ ತೆಗೆಯುವ ಮತ್ತು ಹತ್ತಿ ಬೀಜ ತೆಗೆದು ಅರಳಿಯನ್ನು ಒತ್ತಿ ಬೇಲ್ ಮಾಡುವ ಕಾರ್ಖಾನೆಗಳಿವೆ. ಪ್ರಾಚೀನ ಕಾಲದಿಂದಲೂ ಈ ಪ್ರದೇಶದಲ್ಲಿ ಪ್ರಮುಖ ಸಣ್ಣ ಕೈಗಾರಿಕೆಯಾಗಿ ಬೆಳೆದಿರುವ ಕೈ ಮಗ್ಗ ಬಟ್ಟೆ ತಯಾರಿಕೆಯೂ ಇಂದಿಗೂ ತನ್ನ ಪ್ರಾಮುಖ್ಯತೆಯನ್ನು ಉಳಿಸಿಕೊಂಡು ಬಂದಿದೆ. ಇಲ್ಲಿ ಪಂಜೆ, ಸೀರೆ, ಕುಪ್ಪಸದ ಬಟ್ಟೆ, ಟವೆಲ್ಲು ಮುಂತಾ ವಸ್ತ್ರಗಳನ್ನು ತಯಾರಿಸಲಾಗುತ್ತದೆ. ೮೦೦ ಕ್ಕೂ ಹೆಚ್ಚು ಕೈ ಮಗ್ಗಗಳಿದ್ದು ಕಂಬಳಿ ನೇಯ್ಗೆಯೂ ಸಹ ಸಣ್ಣ ಕೈಗಾರಿಕೆಯಾಗಿ ಉಳಿದು ಬಂದಿದ್ದು, ಈಚಲು ಗರಿ ಮತ್ತು ಬಿದಿರನ್ನು ಬಳಸಿ ಚಾಪೆ, ಬುಟ್ಟಿಗಳನ್ನು ಈ ಪ್ರದೇಶಗಳಲ್ಲಿ ಬಹಳ ಹಿಂದಿನಿಂದಲೂ ಹೆಣೆಯಲಾಗುತ್ತಿತ್ತು ಅದು ಇಂದಿಗೂ ಮುಂದುವರೆಯುತ್ತಾ ಬಂದಿದೆ ಎಂದು ಹೇಳಬಹುದಾಗಿದೆ.[೨] ಪ್ರಸ್ತುತ ಇದರ ಅಭಿವೃದ್ಧಿಗೆಂದೇ ಸರ್ಕಾರವು ಚಿಕ್ಕಜೋಗಿಹಳ್ಳಿಯಲ್ಲಿ ಚಾಪೆ ತಯಾರಕರ ಸಹಕಾರ ಸಂಘವನ್ನು ಸ್ಥಾಪಿಸಿದ್ದು, ಇದು ಈ ಕಲೆಯ ಬೆಳವಣಿಗೆಗೆ ಸಹಕಾರಿಯಾಗಿದೆ. ಸಾಮಾನ್ಯವಾಗಿ ಎಲ್ಲ ಹಳ್ಳಿಗಳಲ್ಲೂ ಕೃಷಿ ಉಪಕರಣಗಳ ತಯಾರಿಕೆಯಲ್ಲಿ ತೊಡಗಿರುವ ಬಡಗಿ ಮತ್ತು ಕಮ್ಮಾರ ಸಮುದಾಯವನ್ನು ಕಾಣಬಹುದಾಗಿದೆ. ಅಲ್ಲದೆ ಬಂಗಾರ ಮತ್ತು ಬೆಳ್ಳಿ ಆಭರಣಗಳನ್ನು ತಯಾರಿಸುವ ಅಕ್ಕಸಾಲಿಗರು ಕೂಡ ಎಲ್ಲಾ ಕಡೆಯೂ ಕಾಣಸಿಗುತ್ತಾರೆ.

ಹೀಗೆ ಕೂಡ್ಲಿಗಿ ತಾಲೂಕಿನಲ್ಲಿ ಇತ್ತೀಚಿನ ದಿನಗಳಲ್ಲಿ ಶಿಕ್ಷಣದಂತಹ ಸರ್ಕಾರಿ ಸೌಲಭ್ಯಗಳನ್ನು ಪಡೆದು ಇಲ್ಲಿನ ಜನವರ್ಗ ಆರ್ಥಿಕ ಅಭಿವೃದ್ಧಿಯ ಹೆಜ್ಜೆಯನ್ನಿಟ್ಟಿದ್ದಾರೆ ಎಂದು ಹೇಳಬಹುದು.

### ೨.೨. ಸ್ಥಳನಾಮ

ಯಾವುದೇ ಪ್ರದೇಶದ ಬಗ್ಗೆ ಅಧ್ಯಯನ ಮಾಡುವಾಗ ಆ ಸ್ಥಳದ ಹೆಸರಿನ ಹಿನ್ನೆಲೆ

ತಿಳಿಸುವುದು ಮುಖ್ಯವೆನಿಸುತ್ತದೆ. ಈ ನಿಟ್ಟಿನಲ್ಲಿ ಕೂಡ್ಲಿಗಿ ಸ್ಥಳನಾಮವನ್ನು ಕುರಿತು ವಿವರಿಸುವ ಪ್ರಯತ್ನ ಮಾಡಲಾಗಿದೆ. ಸ್ಥಳನಾಮವನ್ನು, ಸಸ್ಯವಾಚಕ, ಜಲವಾಚಕ, ಮತ್ತು ವ್ಯಕ್ತಿವಾಚಕ ಹಿನ್ನೆಲೆಯಲ್ಲಿ ಗುರುತಿಸುವ ಪರಿಪಾಠವಿದೆ. ಈ ಮಾದರಿಯಲ್ಲಿ ಕೂಡ್ಲಿಗಿಯ ಸ್ಥಳನಾಮವನ್ನು ಕುರಿತಂತೆ ವಿದ್ವಾಂಸರು ತಮ್ಮದೇ ಆದಂತಹ ಅಭಿಪ್ರಾಯವನ್ನು ಹೊಂದಿದ್ದಾರೆ.

ಐತಿಹ್ಯದ ಪ್ರಕಾರ, ರಾಮಾಯಣದ ಕಾಲದಲ್ಲಿ ವಾನರ ಸೇನೆಯು ಹಂಪಿಯ ಬೆಟ್ಟಗಳಲ್ಲಿ ವಾಸಿಸುತ್ತಿದ್ದರು. ಶ್ರೀರಾಮನ ಸಹಾಯಕ್ಕಾಗಿ ದಕ್ಷಿಣ ಲಂಕೆಯ ಕಡೆಗೆ ಸೀತೆಯ ಅನ್ವೇಷಣೆಗೆ ಹೋಗುವಾಗ ನಾನಾ ಕಡೆಯಿಂದ ವಾನರ ಸೇನೆಯು ಇಲ್ಲಿ ಕೂಡಿರುತ್ತದೆ. ಆದ್ದರಿಂದ ಈ ಸ್ಥಳಕ್ಕೆ 'ಕೂಡಲಗಿ' ನಾಮಾರ್ಥ ಬಂದಿದ್ದು ಮುಂದೆ ಅದು ಕೂಡ್ಲಿಗಿ ಅಗಿರುವ ಸಾಧ್ಯತೆಯಿದೆ. ಮತ್ತೊಂದು ರೀತಿಯಲ್ಲಿ ಹೇಳವುದಾದರೆ, ಬೇರೆ ಬೇರೆ ಕಡೆಯ ದಾರಿಗಳು ಒಂದೆಡೆ ಕೂಡುವಿಕೆಯ ಕೇಂದ್ರವಾಗಿರುವ ಸ್ಥಳಕ್ಕೆ ಕೂಡ್ಲಿಗಿ ಎಂದು ಕರೆದಿರಬಹುದಾಗಿದೆ.[೧೩]

ಕು.ಬಾ.ಸ ಅವರ ಪ್ರಕಾರ, ಬೇರೆ ಕಡೆಯಿಂದ ಜನಬಂದು ಇಲ್ಲಿ ಕೂಡಿದ್ದರಿಂದ ಈ ಸ್ಥಳಕ್ಕೆ 'ಕೂಡಲಗಿ' ಎಂದು ಇದು ಕ್ರಮೇಣವಾಗಿ ಕೂಡ್ಲಿಗಿ ಆಗಿದೆ ಎಂಬ ಅಭಿಪ್ರಾಯಕ್ಕೆ ಬಂದಿದ್ದಾರೆ.[೧೪]

ಗುರುಮೂರ್ತಿ ಪೆಂಡಕೂರ ರವರು ತಮ್ಮ ಬಳ್ಳಾರಿ ಜಿಲ್ಲೆಯ ಸ್ಥಳನಾಮಗಳು ಎಂಬ ಪುಸ್ತಕದಲ್ಲಿ ಕೂಡ್ಲಿಗಿ ಸ್ಥಳ ನಾಮವನ್ನು ಕುರಿತಂತೆ ಗುಡೇಕೋಟೆ ಮತ್ತು ಜರಿಮಲೆಯ ಪಾಳೆಯಗಾರರು ಪತನವಾದ ಮೇಲೆ ಅಲ್ಲಿನ ಜನರು ಈ ಸ್ಥಳಕ್ಕೆ ಬಂದು ನೆಲೆಸಿರುವರು ಮತ್ತು ಕರ್ನಾಟಕದ 'ಗಿ' ಪ್ರತ್ಯಯದ ಅನೇಕ ಸ್ಥಳಗಳಿಗೆ ನೀರಲಿಗಿ, ಮೂಡಲಿಗಿ, ಅಂಕಲಿಗಿ ಎಂಬ ನಾಮಾಂಕಿತ ವಿರುವುದು ತಿಳಿದುಬರುತ್ತದೆ.[೧೫]

ಒಟ್ಟಿನಲ್ಲಿ ಈ ಎಲ್ಲಾ ವಿದ್ವಾಂಸರ ಅಭಿಪ್ರಾಯದ ಮೇರೆಗೆ ಕೂಡ್ಲಿಗಿ ಎಂಬ ಸ್ಥಳನಾಮದ ಬಗ್ಗೆ ಯಾವುದೇ ಶಾಸನಗಳಲ್ಲಿ ಉಲ್ಲೇಖವಾಗಿಲ್ಲದರಿಂದ, ಮೌಖಿಕ ಕಥನವನ್ನೇ ಆಧರಿಸಿ ಈ ಪ್ರದೇಶದ ಸ್ಥಳನಾಮವು ಕೂಡುವಿಕೆಯ ಅರ್ಥವನ್ನು ಸೂಚಿಸುವ ಪದವಾದ 'ಕೂಡಲಗಿ' ಕೂಡ್ಲಿಗಿ ಎಂಬುದಾಗಿ ಮಾರ್ಪಟ್ಟಿದೆ ಎಂಬ ಅಂತಿಮ ನಿರ್ಧಾರಕ್ಕೆ ಬರಲಾಗಿದೆ, ಹೀಗೆ ಈ ಪ್ರದೇಶವು ಇಂದು ತಾಲೂಕು ಕೇಂದ್ರವಾಗಿ ರೂಪುಗೊಂಡು ಅಭಿವೃದ್ದಿಯನ್ನು ಕಾಣುತ್ತಿದೆ ಎಂದು ಹೇಳಬಹುದು.

ಒಟ್ಟಿನಲ್ಲಿ ಕೂಡ್ಲಿಗಿ ತಾಲೂಕು ಪರಿಸರವು ಪ್ರಾಗಿತಿಹಾಸ ಕಾಲದಿಂದಲೂ ಮಾನವನು ವಾಸಿಸಲು ಯೋಗ್ಯವಾದ ವಾತವರಣದಿಂದ ಕೂಡಿತ್ತು ಎಂಬುದು ಗಮನಾರ್ಹ.

### ೨.೩. ಪ್ರಾಗೈತಿಹಾಸಿಕ ಹಿನ್ನೆಲೆ

ಆದಿ ಮಾನವನ ವಿಕಾಸ ಹಾಗೂ ಆತನು ಬೆಳೆದು ಬಂದ ಹಾದಿ ಮತ್ತು ದೀರ್ಘಕಾಲದ ಆತನ ಜೀನವ ಶೈಲಿಯನ್ನು ಅಧ್ಯಯನ ದೃಷ್ಟಿಯಿಂದ ಪ್ರಾಗಿತಿಹಾಸ ಕಾಲ, ಆದಿ ಇತಿಹಾಸಕಾಲ, ಮತ್ತು ಇತಿಹಾಸ ಕಾಲ ಎಂದು ಅನುಕ್ರಮವಾಗಿ ವಿಭಾಗಿಸಿಕೊಳ್ಳಲಾಗಿದೆ. ಇದರಲ್ಲಿ ಮೊದಲನೆಯ

ಹಂತವಾದ ಪ್ರಾಗೈತಿಹಾಸಿಕ ಕಾಲವು ಮಾನವನಿಗೆ ಅಕ್ಷರ ಜ್ಞಾನವಿಲ್ಲದ ಕಾಲವಾಗಿದೆ. ಈ ಕಾಲಘಟ್ಟದಲ್ಲಿ ಮಾನವನು ಭೂಮಿಯ ಮೇಲೆ ಅನಾಗರೀಕ ಬದುಕನ್ನು ಸಾಗಿಸುತ್ತಿದ್ದ ಮತ್ತು ಯಾವುದೇ ರೀತಿಯ ಬರವಣಿಗೆಯನ್ನಾಗಲಿ, ಲಿಪಿಯನ್ನಾಗಲಿ ಕಂಡುಕೊಂಡಿರಲಿಲ್ಲ. ಆದ್ದರಿಂದ ಆದಿಮ ಸಮಾಜದ ಜೀವನ ಕ್ರಮವನ್ನು ಕುರಿತಾದ ಸಾಹಿತ್ಯ, ದಂತಕಥೆಗಳು ನಮಗೆ ಲಭ್ಯವಾಗುವುದಿಲ್ಲ. ಆದರೂ ಅವನು ಕಾಲಾನುಕ್ರಮದಲ್ಲಿ ಬಿಟ್ಟುಹೋದ ಕುರುಹುಗಳಿಂದ ಅವನ ಜೀವನ ವೃತ್ತಾಂತವನ್ನು ತಿಳಿಯುವ ಪ್ರಯತ್ನ ಇಂದಿಗೂ ನಡೆಯುತ್ತಲಿದೆ.

ಆದಿ ಮಾನವ ತನ್ನ ದಿನ ನಿತ್ಯದ ಬದುಕಿನಲ್ಲಿ ಬೇಟೆಯಾಡಲು, ಆಹಾರ ಸಂಗ್ರಹಿಸಲು ಬಳಸಿದಂತಹ ಕಲ್ಲಿನ ಆಯುಧೋಪಕರಣಗಳು, ಮಣ್ಣಿನ ಮಡಿಕೆಗಳು, ಆತನು ಪ್ರಕೃತಿಯಲ್ಲಿ ತಾನು ಕಂಡದ್ದನ್ನು, ತನಗಾದ ಅನುಭವಗಳನ್ನು, ಭಾವನೆಗಳನ್ನು ಗುಹೆಗಳಲ್ಲಿ, ಬಯಲು ಬಂಡೆಗಳ ಮೇಲೆ ಅಭಿವ್ಯಕ್ತಗೊಳಿಸಿದ ಕುಟ್ಟುಚಿತ್ರ, ಗೀರುಚಿತ್ರ ಮತ್ತು ವರ್ಣಚಿತ್ರಗಳು ಮತ್ತು ಶಿಲಾಸಮಾಧಿಗಳ ನೆರವಿನಿಂದ ಗತ ಜೀವನವನ್ನು ನಾವು ತಿಳಿಯಬಹುದಾಗಿದೆ.

ಈ ರೀತಿಯಲ್ಲಿ ಅಭಿವ್ಯಕ್ತಗೊಂಡ ವರ್ಣ ರೇಖಾ ಚಿತ್ರಗಳು ಶಿಲಾಸಮಾಧಿಗಳು ವಾಸ್ತುಶಿಲ್ಪದ ಕುರುಹುಗಳಾಗಿವೆ. ಮತ್ತು ಅವನು ಬಳಸಿ ಬಿಟ್ಟು ಹೋದ ಆಯುಧೋಪಕರಣಗಳು ಪ್ರಮುಖ ಆಕರ ಸಾಮಗ್ರಿಗಳಾಗಿವೆ. ಈ ಆಯುಧೋಪಕರಣಗಳ ಆಧಾರದ ಹಿನ್ನೆಲೆಯಲ್ಲಿ ಪ್ರಾಗಿತಿಹಾಸವನ್ನು 'ಶಿಲಾಯುಗ'ವೆಂದು ಕರೆಯಲಾಯಿತು. ಮತ್ತು ಶಿಲಾಯುಧಗಳ ಜೊತೆಗೆ ಲೋಹವನ್ನು ಬಳಸಲು ಪ್ರಾರಂಭವಾದ ಕಾಲಘಟ್ಟವನ್ನು ಲೋಹಯುಗವೆಂದು ಎರಡು ರೀತಿಯಲ್ಲಿ ಅಭ್ಯಾಸಿಸಲಾಯಿತು.

ಶಿಲಾಯುಗದಲ್ಲಿ ಮಾನವ ಒಂದೇ ರೀತಿಯಾಗಿರಲಿಲ್ಲ. ಆತನು ಭೌತಿಕವಾಗಿಯೂ, ಹಾಗೂ ಶಾರೀರಿಕವಾಗಿಯು ಬದಲಾವಣೆಯನ್ನು ಹೊಂದುವುದರ ಜೊತೆಗೆ ತನ್ನ ಸುತ್ತಲಿನ ಪರಿಸರದಲ್ಲಿಯೂ ಪರಿವರ್ತನೆಯನ್ನುಂಟು ಮಾಡುತ್ತಿದ್ದನು. ಹೀಗೆ ಶಿಲಾಯುಗದ ಮಾನವನ ಜೀವನ ಸಂಸ್ಕೃತಿಯನ್ನು ತಿಳಿಯಲು ಅನುಕ್ರಮವಾಗಿ ಹಳೆ ಶಿಲಾಯುಗ, ಮಧ್ಯ ಹಳೆ ಶಿಲಾಯುಗ, ನವಶಿಲಾಯುಗ ಮತ್ತು ಶಿಲಾ-ತಾಮ್ರಯುಗ (ಲೋಹಯುಗ) ಮತ್ತು ಬೃಹತ್ ಶಿಲಾಯುಗ ಅಥವಾ ಕಬ್ಬಿಣ ಯುಗ ಎಂದು ನಾಲ್ಕು ವಿಭಾಗಗಳಾಗಿ ವಿಂಗಡಿಸಲಾಗಿದೆ.

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕು ಪರಿಚಿತವಾಗಿರುವುದು ಕುಮತಿಯ ಮಾನವಾಕೃತಿ ಶಿಲ್ಪಗಳಿಂದ[೧೬] ಅಷ್ಟೇ ಅಲ್ಲದೆ, ಗುಡೇಕೋಟೆ, ಟಿ.ಕಲ್ಲಹಳ್ಳಿ, ಜರಿಮಲೆ, ರಾಮದುರ್ಗ, ಹಾಲಸಾಗರ, ಮೊದಲಾದ ಸ್ಥಳಗಳು ಆದಿಮಾನವನ ನೆಲೆಗಳಾಗಿವೆ. ಇಲ್ಲಿನ ಪರಿಸರದಲ್ಲಿ ಆದಿಮಾನವರು ಪ್ರಾಗೈತಿಹಾಸಿಕ ಕಾಲದಿಂದಲೂ ವಾಸ್ತವ್ಯ ಊಡಿದ್ದರೆಂಬುದಕ್ಕೆ ಪುರಾತತ್ವಶಾಸ್ತ್ರಜ್ಞರಿಗೆ, ಇತಿಹಾಸ ಮತ್ತು ಸಂಶೋಧನಾಸಕ್ತರಿಗೆ ದೊರೆತಂತಹ ಪ್ರಾಚ್ಯ ಅವಶೇಷಗಳು ಹಾಗೂ ಸಂಗನಕಲ್ಲು ನೆಲೆಯಲ್ಲಿ ಕೈಗೊಂಡಂತಹ ಉತ್ಖನನದ ವರದಿಗಳಿಂದ ತಿಳಿದುಬಂದಿದೆ. ಹೀಗೆ ಕರ್ನಾಟಕ ಪ್ರಾಗಿತಿಹಾಸ ಕಾಲದ ದೃಷ್ಟಿಯಲ್ಲಿ ಈ ತಾಲೂಕು ಪ್ರದೇಶವು ತನ್ನದೇ ಆದ ಮಹತ್ವವನ್ನು ಪಡೆದುಕೊಂಡಿದೆ.

## ೧. ಹಳೆ ಶಿಲಾಯುಗ ಸಂಸ್ಕೃತಿ (Poleolithic culture)

ಹಳೆ ಶಿಲಾಯುಗ ಎಂಬ ಕನ್ನಡ ಪದವು ಇಂಗ್ಲೀಷ್‌ನ 'ಪ್ಯಾಲಿಯೋಲೆಥಿಕ್' ಎಂಬ ಪದಕ್ಕೆ ಸಮನಾಗಿದೆ. ಪ್ಯಾಲಿಯೋಲೆಥಿಕ್ ಎಂಬ ಪದವು ಗ್ರೀಕ್‌ನ ಪ್ಯಾಲಿಯೋ ಮತ್ತು ಲೆಥಿಕ್ ಎಂಬ ಎರಡು ಪದಗಳಿಂದ ನಿಷ್ಪತ್ತಿ ಹೊಂದಿದೆ. ಪ್ಯಾಲಿಯೋ ಎಂದರೆ, ಹಳೆಯ ಎಂತಲೂ ಲೆಥಿಕ್ ಎಂದರೆ ಶಿಲೆ ಎಂಬ ಅರ್ಥವಿದೆ. ಒಟ್ಟಿನಲ್ಲಿ ಈ ಕಾಲದಲ್ಲಿ ಮಾನವನು ಜೀವನ ನಿರ್ವಹಣೆಗಾಗಿ ಒರಟು ಒರಟಾದ ಶಿಲಾ ಉಪಕರಣಗಳನ್ನು ತಯಾರಿಸಿಕೊಂಡು ಬಳಕೆ ಮಾಡುತ್ತಿದ್ದ ಮತ್ತು ಅವನ ರೀತಿ ನೀತಿಗಳು ಸಾಕಷ್ಟು ಸುಧಾರಿಸಿದೇ ಇನ್ನೂ ಆದಿಮ ಹಂತದಲ್ಲಿದ್ದುದರಿಂದ ಈ ಕಾಲ ಘಟ್ಟವನ್ನು "ಹಳೆ ಶಿಲಾಯುಗ ಸಂಸ್ಕೃತಿ" ಎಂದು ಕರೆಯಲಾಗಿದೆ. ಈ ಹಳೆ ಶಿಲಾಯುಗವನ್ನು ಅಧ್ಯಯನದ ದೃಷ್ಟಿಯಿಂದ ಪುನಃ ಮೂರು ವಿಭಾಗಗಳಾಗಿ ವರ್ಗೀಕರಿಸಲಾಗಿದೆ.[೧೭]

೧.೧ ಆದಿ ಹಳೆ ಶಿಲಾಯುಗ

೧.೨ ಮಧ್ಯ ಹಳೆ ಶಿಲಾಯುಗ

೧.೩ ಅಂತ್ಯ ಹಳೆ ಶಿಲಾಯುಗ

### ೧.೧ ಆದಿ ಹಳೆ ಶಿಲಾಯುಗ (Upper Paleolithic Age)

ಸುಮಾರು ೭ ಲಕ್ಷದಿಂದ ೧.೨೫ ಲಕ್ಷ ವರ್ಷಗಳಷ್ಟು ಹಿಂದಿನ ಕಾಲ ಘಟ್ಟವನ್ನು ಹಳೆಶಿಲಾಯುಗ ಕಾಲವೆಂದು ಕರೆಯಲಾಗಿದೆ.[೧೮] ಆದಿ ಹಳೆ ಶಿಲಾಯುಗದ ಅವಶೇಷಗಳು ಭಾರತದಾದ್ಯಂತ ಅನೇಕ ನೆಲೆಗಳಲ್ಲಿ ಕಂಡುಬಂದಿವೆ. ಕರ್ನಾಟಕದಲ್ಲಿಯೂ ಸಹ ಆದಿ ಹಳೆ ಶಿಲಾಯುಗ ಕಾಲದಿಂದಲೂ ಮಾನವನ ಚಟುವಟಿಕೆಗಳನ್ನು ಗುರುತಿಸಲಾಗಿದ್ದು, ಅದರಲ್ಲೂ ಬಳ್ಳಾರಿ ಜಿಲ್ಲೆಯ ಆಗಿನ ಮದ್ರಾಸ್ ಪ್ರಾಂತ್ಯದ ಇತರೆ ಜಿಲ್ಲೆಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಶಿಲಾಯುಗದ ನೆಲೆಗಳನ್ನು ಗುರುತಿಸಲಾಗಿದೆ ಎಂದು ೧೯೦೮ರ ಭಾರತದ ಇಂಫೀರಿಯಲ್ ಗೆಜಟಿಯರ್ ತಿಳಿಸುತ್ತದೆ. ಈ ಸಂಸ್ಕೃತಿಗೆ ಸೇರಿದ ನೆಲೆಗಳು ಕರ್ನಾಟಕದಲ್ಲಿ ಕೃಷ್ಣ ಮೇಲ್ದಂಡೆ ಮತ್ತು ಘಟಪ್ರಭಾನದಿ ಪಾತ್ರದಲ್ಲಿ ೧೫ ನೆಲೆಗಳನ್ನು ಸಂಶೋಧಕರು ಗುರುತಿಸಿದ್ದಾರೆ.

ಭಾರತದ ಪ್ರಾಗಿತಿಹಾಸದ ಪಿತಾಮಹ ಎಂದು ಕರೆಯಲ್ಪಟ್ಟಿರುವ ರಾಬರ್ಟ್ ಬ್ರೂಸ್‌ಫೂಟ್‌ನು ಈ ಜಿಲ್ಲೆಯ ಪ್ರಮುಖ ಪ್ರಾಗೈತಿಹಾಸಿಕ ನೆಲೆಗಳನ್ನು ಸರ್ವೇಕ್ಷಣೆ ಮಾಡಿ ಸುಮಾರು ೭೭ ನೆಲೆಗಳನ್ನು ಗುರುತಿಸಿ ಅವುಗಳಲ್ಲಿ ೩೬ ನೆಲೆಗಳು ಪ್ರಮುಖವಾಗಿವೆ ಎಂದು ತಿಳಿಸುತ್ತಾನೆ.[೧೯] ಬಳ್ಳಾರಿ ಜಿಲ್ಲೆಯ ಬಾದನಹಟ್ಟಿ ಬೆಟ್ಟ, ಮಲ್ಲಾಪುರ, ಬೆಳಗಲ್ಲು, ದರೋಜಿ, ಕಮಲಾಪುರ, ಗಾದಿಗನೂರು, ಕುರೆಕುಪ್ಪೆ, ಜೋಗ, ಕುರುವತ್ತಿ ಮೊದಲಾದ ಸ್ಥಳಗಳಲ್ಲಿ ಈ ಕಾಲಘಟ್ಟದಲ್ಲಿ ಮಾನವನು ಬಳಸಿ ಬಿಟ್ಟು ಹೋದ ಶಿಲಾ ಉಪಕರಣ ಮತ್ತು ಇತರೆ ಅವಶೇಷಗಳು ಕಂಡುಬಂದಿವೆ. ಆದರೆ ಪ್ರಸ್ತುತ ಅಧ್ಯಯನ ಕ್ಷೇತ್ರವಾದ ಕೂಡ್ಲಿಗಿ ತಾಲೂಕಿನಲ್ಲಿ ಕಂಡುಬಂದಿರುವ

ಏಕೈಖ ನೆಲೆ ಜುಮ್ಮೋಬನ ಹಳ್ಳಿಯಾಗಿದೆ. ಜುಮ್ಮೋಬನಹಳ್ಳಿಯ ವಾಯುವ್ಯ ದಿಕ್ಕಿನ ಪಿಕಪ್‌ಹಳ್ಳದ ಬಳಿಯ ದಂಡೆಯ ಮೇಲಿನ ಜಮೀನಿನೊಂದರಲ್ಲಿ ಆದಿ ಹಳೆ ಶಿಲಾಯುಗ ಸಂಸ್ಕೃತಿಗೆ ಸೇರಿದ ನೀಸ್ ಜಾತಿಯ ಶಿಲೆಯಿಂದ ಅಷ್ಯೂಲಿಯನ್ ಮಾದರಿಯಲ್ಲಿ ತಯಾರಿಸಿದ ಶಿಲಾ ಕೊಡಲಿಯನ್ನು ಡಾ. ಹೆಚ್. ತಿಪ್ಪೇಸ್ವಾಮಿಯವರು ಸಂಶೋಧಿಸಿದ್ದಾರೆ.[೨೦] ಈ ಕೊಡಲಿಯ ಹಿಂಭಾಗ ಮತ್ತು ಮುಂಭಾಗದಲ್ಲಿ ಚಕ್ಕೆಗಳನ್ನು ಎಬ್ಬಿಸಲಾಗಿದ್ದು, ಆಯುಧದ ಮತ್ತೊಂದು ಭಾಗ ಬಾಯಿಯ ಭಾಗ ೫ ಸೆ.ಮೀ ಇದೆ. ಈ ಪ್ರದೇಶವು ಕುರುಚಲು ಕಾಡು ಹಾಗೂ ಉತ್ತಮವಾದ ನೆಲ ಜಲವನ್ನು ಹೊಂದಿದ್ದು ಮಾನವನು ವಾಸಿಸಲು ಯೋಗ್ಯವಾದ ಪರಿಸರವಾಗಿದ್ದರಿಂದ ಹಳೆಯ ಶಿಲಾಯುಗದ ಕಾಲದಿಂದಲೂ ಮಾನವನ ಅಸ್ತಿತ್ವವಿತ್ತೆಂದು ಸ್ಪಷ್ಟವಾಗುತ್ತದೆ.

### ೧.೨ ಮಧ್ಯ ಹಳೆ ಶಿಲಾಯುಗ **(Middle Paleolithic Age)**

ಈ ಕಾಲಘಟ್ಟಕ್ಕೆ ಸೇರಿದ ನಿವೇಶನಗಳು ಕರ್ನಾಟಕದ ಕೃಷ್ಣ ತುಂಗಭದ್ರ ನದಿಗಳ ಪ್ರದೇಶದಲ್ಲಿ ಪುರಾತತ್ವಜ್ಞರು ಗುರುತಿಸಿದ್ದಾರೆ. ಈ ನೆಲೆಗಳಲ್ಲಿ ದೊರಕಿರುವ ಕುರುಹುಗಳು ಮಧ್ಯಹಳೆ ಶಿಲಾಯುಗ ಸಂಸ್ಕೃತಿಯನ್ನು ಅರಿಯಲು ಸಹಕಾರಿಯಾಗಿವೆ. ಬಳ್ಳಾರಿ ಜಿಲ್ಲೆಯಲ್ಲಿ ಈ ಕಾಲಘಟ್ಟಕ್ಕೆ ಸೇರಿದ ನಿವೇಶನಗಳನ್ನು ಸಂಗನಕಲ್ಲು, ನಿಟ್ಟೂರು, ನೆಲೆಗಳಲ್ಲಿ ಬೆಳಕಿಗೆ ತರಲಾಗಿದೆ.[೨೧] ಆದರೆ ಅಧ್ಯಯನ ಪ್ರದೇಶದಲ್ಲಿ ಇದುವರೆಗೂ ಬೆಳಕಿಗೆ ಬಂದಿಲ್ಲ. ಇತರೆ ಪ್ರದೇಶದ ನೆಲೆಗಳಲ್ಲಿ ದೊರಕಿರುವ ಕುರುಹುಗಳು ಆದಿ ಹಳೆ ಶಿಲಾಯುಗಕ್ಕಿಂತಲೂ ಭಿನ್ನವಾಗಿ ಉತ್ತಮ ಜಾತಿಯ ಜಾಸ್ಪರ್, ಚರ್ಟ್ ಮೊದಲಾದ ಶಿಲೆಗಳನ್ನು ಬಳಸಿ ವಿವಿಧ ಆಯುಧೋಪಕರಣಗಳನ್ನು ತಯಾರಿಸಲಾಗಿದೆ. ಆದರೆ ಈ ಕಾಲದ ಉಪಕರಣಗಳನ್ನು ಯಾವ ರೀತಿಯಲ್ಲಿ ಉಪಯೋಗಿಸುತ್ತಾರೆ ಎಂಬುದು ಸ್ಪಷ್ಟವಾಗಿ ತಿಳಿದಿಲ್ಲ ಆದರೂ ಅನೇಕ ಬದಲಾವಣೆಗಳನ್ನು ಈ ಹಂತದಲ್ಲಿ ಆದಿಮಾನವ ಮಾಡಿಕೊಂಡಿದ್ದನ್ನು ವಿದ್ವಾಂಸರು ಗುರುತಿಸುವಲ್ಲಿ ಸಫಲರಾಗಿದ್ದಾರೆ. ಈ ಕಾಲದ ಆದಿಮಾನವ ನದಿಯ ಅಂಚಿನಲ್ಲಿ ಅಷ್ಟೇಯಲ್ಲದೇ ಬಯಲುಗಳಲ್ಲಿ ವಾಸ ಮಾಡಲು ರೂಢಿಸಿಕೊಂಡನು. ಹಾಗೂ ವೇಗವಾಗಿ ಓಡಬಲ್ಲ ಪ್ರಾಣಿಗಳನ್ನು ಬೇಟೆಯಾಡಲು ಬಿಲ್ಲು ಬಾಣಗಳ ಪ್ರಯೋಗ ಮಾಡಿದನು. ಮೈ ಮುಚ್ಚಿಕೊಳ್ಳಲು ಅಥವಾ ಮಳೆ ಗಾಳಿಗಳಿಗೆ ದೇಹ ರಕ್ಷಣೆ ಪಡೆಯಲು ಮರದ ತೊಗಟೆ ಇಲ್ಲವೆ ಪ್ರಾಣಿಗಳ ಚರ್ಮವನ್ನು ಬಳಸಿಕೊಳ್ಳವುದಕ್ಕೆ ಪ್ರಾರಂಭಿಸಿದ. ಮತ್ತು ನದಿ, ಹಳ್ಳಗಳನ್ನು ದಾಟಲು ಬುಟ್ಟಿಯಾಕಾರದ ಕಿರು ದೋಣಿಗಳನ್ನು ಈ ಕಾಲದಲ್ಲಿ ಮಾಡಿಕೊಂಡಿರಬಹುದೆಂದು ಊಹಿಸಲಾಗಿದ್ದು, ಇವೆಲ್ಲವನ್ನು ಆದಿಮಾನವನು ತನ್ನ ಜೀವನ ಕ್ರಮದಲ್ಲಿ ಮಾಡಿಕೊಂಡ ಬದಲಾವಣೆಗಳನ್ನು ಸೂಚಿಸುತ್ತದೆ.

### ೧.೩ ಅಂತ್ಯ ಹಳೆ ಶಿಲಾಯುಗ **(Lower Paleolethic Age)**

ಹಳೆ ಶಿಲಾಯುಗ ಸಂಸ್ಕೃತಿಯ ಕೊನೆ ಹಂತವೇ ಅಂತ್ಯ ಹಳೆ ಶಿಲಾಯುಗವಾಗಿದೆ. ತುಲನಾತ್ಮಕ ಪರಿಶೋಧನೆಯಂತೆ ಈ ಹಂತದ ನೆಲೆಗಳು ಸಂಖ್ಯೆಯಲ್ಲಿ ಕಡಿಮೆಯಾಗಿವೆ.

ರಾಜ್ಯದಲ್ಲಿ ಮೊಟ್ಟ ಮೊದಲಿಗೆ ೧೯೫೯ ರಲ್ಲಿ ಸಾಳವಾಡಗಿಯಲ್ಲಿ ಉಪಕರಣ ಉತ್ಪಾದನಾ ನೆಲೆಯನ್ನು ಸುಂದರ್ ಅವರು ಗುರುತಿಸಿದ್ದಾರೆ.[೨೨] ರಾಜ್ಯದಲ್ಲಿ ಮಾಂಜ್ರಾ, ದ್ರೋಣ, ಕೃಷ್ಣ, ತುಂಗಾ, ಶಿಂಷಾ ಹಾಗೂ ಪೆನ್ನಾರ್‌ನದಿ ಕೊಳ್ಳಗಳಲ್ಲಿ ಈ ನೆಲೆಗಳು ಹೆಚ್ಚಾಗಿ ಕಂಡುಬಂದಿವೆ. ಆದರೆ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಈ ಕಾಲಘಟ್ಟದ ಒಂದು ನೆಲೆಯು ಇದುವರೆಗೂ ದೊರೆತಿಲ್ಲ. ಈ ಸಂಸ್ಕೃತಿಯ ಉಪಕರಣಗಳ ಮಾದರಿಗಳು ನೀಳ ಅಲುಗುಗಳು, ಚೂರಿತರಹದ ಚಕ್ಕೆ, ಪೊರೆಯುಳಿ, ಕೊರಗ, ಬಾಣದ ಮೊನೆ, ಮೊದಲಾದ ಮಾದರಿಯ ಆಯುಧಗಳು ಈ ಹಂತದ ವೈಶಿಷ್ಟ ಉಪಕರಣಗಳಾಗಿವೆ. ಇವುಗಳಲ್ಲಿ ಅಲಗು, ಮೊನೆ, ಹೆರೆಯುವ ಮಾದರಿ ಉಪಕರಣಗಳು ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ಅಲ್ಲದೆ ಎಲಬು, ದಂತ ಮತ್ತು ಜಿಂಕೆಯ ಕವಲು ಕೊಂಬು ಮೊದಲಾದವುಗಳಿಂದ ಉಪಕರಣಗಳನ್ನು ತಯಾರಿಸಿ ಬಳಸಿದ ಉದಾಹರಣೆಗಳಿವೆ. ಈ ಹಂತದಲ್ಲಿ ಆದಿಮಾನವರು ಮೂರು ರೀತಿಯ ತಂತ್ರಗಳನ್ನು ಅಳವಡಿಸಿಕೊಂಡು ಉಪಕರಣಗಳನ್ನು ತಯಾರಿಸುತ್ತಿದ್ದರು. ಅವುಗಳೆಂದರೆ. ೧. ಪರೋಕ್ಷ ಒತ್ತಡ ತಂತ್ರ. ೨.ವೃಕ್ಷಸ್ಥಳ ಒತ್ತಡ ತಂತ್ರ ೩. ನೇರ ಒತ್ತಡ ತಂತ್ರ ಈ ಹಂತದ ಉಪಕರಣಗಳ ಗಾತ್ರ ಚಿಕ್ಕದಾಗಿತ್ತು. ಈ ಹಂತದಲ್ಲಿ ತಂತ್ರಜ್ಞಾನವು ಹೆಚ್ಚು ಸುಧಾರಿಸಿತು. ಈ ಕಾಲಕ್ಕೆ ಸೇರಿದ ಅವಶೇಷಗಳನ್ನು ವೈಜ್ಞಾನಿಕ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಇಂಗಾಲ ೧೪ರ ಪರೀಕ್ಷೆಯಂತೆ ಈ ಹಂತದ ಕಾಲಮಾನವು ಇಂದಿಗೆ ಸುಮಾರು ೧೦,೦೦೦ ವರ್ಷಗಳಿಂದ ೨೫,೦೦೦ ವರ್ಷಗಳಷ್ಟು ಪೂರ್ವದಲ್ಲಿ ಇದ್ದಿತ್ತೆಂದು ತಿಳಿದುಬರುತ್ತದೆ.[೨೩]

**೨. ಸೂಕ್ಷ್ಮ ಶಿಲಾಯುಗ ಸಂಸ್ಕೃತಿ ಅಥವಾ ಮಧ್ಯಶಿಲಾಯುಗ ಸಂಸ್ಕೃತಿ (Mesolethic Age)**

ಹಳೆಯ ಶಿಲಾಯುಗ ಮತ್ತು ನೂತನ (ನವ) ಶಿಲಾಯುಗದ ನಡುವಿನ ಕಾಲಘಟ್ಟವನ್ನು ಸೂಕ್ಷ್ಮ ಶಿಲಾಯುಗ ಅಥವಾ ಮಧ್ಯ ಶಿಲಾಯುಗ ಎಂದು ಕರೆಯುತ್ತಾರೆ.[೨೪] ಗ್ರೀಕ್ ಭಾಷೆಯಲ್ಲಿ ಮೆಸೋ ಎಂದರೆ ಸೂಕ್ಷ್ಮವೆಂತಲು, ಲೆಥಿಕ್ ಎಂದರೆ ಶಿಲೆ ಎಂಬ ಅರ್ಥಗಳಿವೆ. ಈ ಕಾಲಘಟ್ಟದಲ್ಲಿ ಬಳಸಲ್ಪಟ್ಟ ಆಯುಧಗಳು ಆಕಾರ ಮತ್ತು ಗಾತ್ರದಲ್ಲಿ ಬಹಳಷ್ಟು ಚಿಕ್ಕವಿರುವ ಕಾರಣ ಈ ಕಾಲವನ್ನು ಸೂಕ್ಷ ಶಿಲಾಯುಗ ಸಂಸ್ಕೃತಿ ಅಥವಾ ಮಧ್ಯ ಶಿಲಾಯುಗ (Mesolethic Age) ಎಂದು ಕರೆಯಲಾಗಿದೆ. ಈ ಕಾಲದಲ್ಲಿ ಆಯುಧಗಳ ಗಾತ್ರ ಉದಾಹರಣೆಗೆ ೫.ಮಿ.ಮೀ. ವರೆಗೆ ಅಗಲವಾಗಿವೆ. ಈ ಕಾಲಘಟ್ಟದ ಮಾನವನನ್ನು 'ಹಂಟರ್ ಫಿಶರ್ ಮಾನವ' ಎಂದು ಕರೆಯಲಾಗಿದೆ. ಪ್ರಸ್ತುತ ಅಧ್ಯಯನ ಕ್ಷೇತ್ರದಲ್ಲೂ ಸಹ ಈ ಕಾಲ ಘಟ್ಟಕ್ಕೆ ಸಂಬಂಧಿಸಿದ ನೆಲೆಗಳನ್ನು ವಿದ್ವಾಂಸರು ಗುರುತಿಸಿದ್ದು ಗುಡೇಕೋಟೆ, ಸಿಡೇಗಲ್ಲು, ಓಬಳಾಪುರ, ಜುಮ್ಮೋಬನಹಳ್ಳಿ, ಕರಡಿಹಳ್ಳಿ, ನೆಲೆಗಳು ಪ್ರಮುಖವಾಗಿ ಕಂಡುಬಂದಿವೆ. ೧೯೯೯ ರಲ್ಲಿ ಡಾ.ಹೆಚ್. ತಿಪ್ಪೇಸ್ವಾಮಿಯವರು ಸಿಡೇಗಲ್ಲು ಗ್ರಾಮದ ಹಿರೇಹಳ್ಳದ ದಂಡೆಯಲ್ಲಿ ಈ ಸಂಸ್ಕೃತಿಯ ಕೆಲವು ಸೂಕ್ಷ್ಮಶಿಲೋಪಕರಣಗಳನ್ನು ಪತ್ತೆ ಹಚ್ಚಿದ್ದು ಅವುಗಳು ಚರ್ಟ್ ಶಿಲೆಯಿಂದ ತಯಾರಿಸಲ್ಪಟ್ಟ ಬ್ಲೇಡ್, ಬರೀನ್, ಲುನೇಟ್, ರೀತಿಯ ಚಿಕ್ಕ ಚಿಕ್ಕ ಆಯುಧೋಪಕರಣಗಳಾಗಿವೆ.[೨೫] ಇವುಗಳಲ್ಲಿ ಕೆಲವು ಉಪಕರಣಗಳ ಒಂದು

ಭಾಗವು ಚೂಪಾಗಿದ್ದು ಅವುಗಳ ಎರಡೂ ಬದಿಯಲ್ಲೂ ಹರಿತವಾಗಿವೆ. ಈ ಉಪಕರಣಗಳನ್ನು ಕೊರೆಯುವ ಇಲ್ಲವೇ ಕೊಯ್ಯಲು ಉಪಯೋಗಿಸಿರುವ ಸಾಧ್ಯತೆಯಿದೆ. ಅದೇ ರೀತಿ ಜುಮ್ಮೋಬನಹಳ್ಳಿಯ ಪಿಕಪ್ ಹಳ್ಳದ ಮತ್ತೊಂದು ದಂಡೆಯಲ್ಲಿ ಈ ಸಂಸ್ಕೃತಿಗೆ ಸೇರಿದ ಕೋರ್‍ನ ಕೆಲ ಚೂರುಗಳನ್ನು ಪತ್ತೆಹಚ್ಚಿದ್ದಾರೆ. ಹಾಗೂ ಈ ಕಾಲಘಟ್ಟದ ಜನರು ಬಳಸುತ್ತಿದ್ದ ಕೈಗೊಡಲಿಯನ್ನು ಗುಡೇಕೋಟೆಯಲ್ಲಿ ಸಂಶೋಧಕರು ಬೆಳಕಿಗೆ ತಂದಿದ್ದಾರೆ. ತಾಲೂಕಿನ ಕರಡಿಹಳ್ಳಿ ಸಮೀಪದ ಈಶಾನ್ಯ ದಿಕ್ಕಿನ ಕರಡಿಗುಡ್ಡದ ಬಳಿ ಈ ಸಂಸ್ಕೃತಿಗೆ ಸೇರಿದ ಕಪ್ಪು ಶಿಲೆಯಿಂದ ತಯಾರಿಸಿದ ಎರಡು ಕೈ ಗೊಡಲಿ ಶೋಧಿಸಿದ್ದಾರೆ.[೨೬] ಒಟ್ಟಿನಲ್ಲಿ ತಾಲೂಕಿನ ಐದು ನೆಲೆಗಳಲ್ಲಿ ಈ ಸಂಸ್ಕೃತಿಗೆ ಸಂಬಂಧಿಸಿದ ಕುರುಹುಗಳು ದೊರೆತಿವೆ. ಹಾಗೂ ಇವುಗಳಿಂದ ತಿಳಿದು ಬರುವ ಅಂಶಗಳೆಂದರೆ ಆಗಿನ ಕಾಲದ ಜನರ ಜೀವನ ವಿಧಾನ, ಆಹಾರ ಪದ್ಧತಿ, ವಸತಿಕ್ರಮ, ಶವ ಸಂಸ್ಕಾರ ಪದ್ಧತಿಯ ಬಗ್ಗೆ ಉಪಯುಕ್ತ ಮಾಹಿತಿ ತಿಳಿದುಬರುತ್ತದೆ.

ಈ ಸಂಸ್ಕೃತಿಯ ಹಂತದಲ್ಲಿ ಮಾನವನು ತನ್ನ ಅಲೆಮಾರಿ ಜೀವನ ಕೈಬಿಟ್ಟು ಒಂದೆಡೆ ನೆಲೆ ನಿಂತಿದ್ದು ಅಲ್ಲದೆ ಬೇಟೆಯಾಡುವುದು, ಮೀನುಗಾರಿಕೆ, ಆಹಾರ ಸಂಗ್ರಹಣೆಯ ಜೊತೆಗೆ ಆಹಾರ ಬೆಳೆಗಳ ಉತ್ಪಾಧನೆಯನ್ನು ಆರಂಭಿಸಿದನು. ಆದ್ದರಿಂದ ಈ ಕಾಲ ಘಟ್ಟವನ್ನು ಮಾನವನ ಸ್ಥಿತ್ಯಂತರದ ಹಂತ ಎಂದು ಗುರುತಿಸಿಕೊಳ್ಳಲಾಗಿದೆ.[೨೭]

ಈ ಹಂತದ ಶಿಲೋಪಕರಣಗಳು ಅತ್ಯಂತ ಚಿಕ್ಕವಾಗಿದ್ದು ಈ ಸಂಸ್ಕೃತಿಯ ವಿಶಿಷ್ಟ ಲಕ್ಷಣವೆಂದೆನಿಸಿದೆ. ಸೂಕ್ಷ್ಮ ಶಿಲಾಯುಧಗಳನ್ನು ಚರ್ಟ್, ಜಾಸ್ಪರ್ ಅಗೇಟ್, ಚಾಲ್ಸಿಡೋನಿ, ಕ್ರಿಸ್ಟಲ್ ಮುಂತಾದ ಅರೆ ಪ್ರಶಸ್ತ ಶಿಲೆಗಳಿಂದ ಹರಿತವಾದ ಹಲಗು ಮತ್ತು ಅರ್ಧ ಚಂದ್ರಾಕೃತಿಯ ಹೆರೆಯುವ ಹಾಗೂ ಕೊರೆಯುವ ಮೊನೆಯುಳ್ಳ ಆಯುಧಗಳನ್ನು ಗಾತ್ರದಲ್ಲಿ ಸೂಕ್ಷ್ಮವಾಗಿಯೂ ಮತ್ತು ಹರಿತವಾಗಿಯೂ ಮಾಡುತ್ತಿದ್ದರು ಎಂದು ತಿಳಿದುಬಂದಿದೆ. ಆಹಾರ ಸಂಗ್ರಹಣೆ ಮಾಡುವುದನ್ನು ತಿಳಿದಿದ್ದರಿಂದ ಈ ಕಾಲವನ್ನು ಸ್ಥಿತ್ಯಂತರ ಹಂತವೆಂದು ಸಹ ಕರೆಯಲಾಗಿದೆ.

ಈ ಸಂಸ್ಕೃತಿಗೆ ಸೇರಿದ ನೆಲೆಗಳು ಭಾರತದಲ್ಲಿ ಹಲವಾರು ಸ್ಥಳಗಳಲ್ಲಿ ಕಂಡುಬಂದಿವೆ. ಕರ್ನಾಟಕದಲ್ಲಿ ೧೯೩೯ರ ವೇಳೆಗೆ ಈ ಕಾಲದ ನಿವೇಶನಗಳು ಬೆಳಕಿಗೆ ಬಂದಿದ್ದರೂ ಅಲ್ಲಿ ದೊರೆತ ಉಪಕರಣಗಳ ವೈಜ್ಞಾನಿಕ ಅಧ್ಯಯನ ೧೯೫೬ ರ ನಂತರ ಆರಂಭವಾಯಿತು. ಬ್ರಹ್ಮಗಿರಿ ಉತ್ಖನನದಲ್ಲಿ ಈ ಹಂತದ ಉಪಕರಣಗಳು ಗಮನಾರ್ಹ ಪ್ರಮಾಣದಲ್ಲಿ ದೊರಕಿದ್ದರೂ ಅವುಗಳನ್ನು ನಿರ್ಧಿಷ್ಟ ಹಾಗೂ ಪ್ರತ್ಯೇಕ ಸ್ಥಳದಲ್ಲಿದ್ದುದನ್ನು ಗುರುತಿಸದೆ ನೂತನ ಶಿಲಾಯುಗಕ್ಕೆ ಸೇರಿದವೆಂದು ಆರಂಭದಲ್ಲಿ ಭಾವಿಸಲಾಗಿತ್ತು. ಈ ಸಂಸ್ಕೃತಿಯ ಶಿಲೋಪಕರಣಗಳು ಸುರಪುರ, ದೋಆಬ್, ಬೆಂಗಳೂರು ಮತ್ತು ಚಿತ್ರದುರ್ಗಜಿಲ್ಲೆ, ಕೃಷ್ಣ ನದಿ ಪಾತ್ರ, ದಕ್ಷಿಣ ಕನ್ನಡ ಜಿಲ್ಲೆಯ ಮಾಣಿ ಮತ್ತು ಉಪ್ಪಿನ ಅಂಗಡಿ, ಬೀದರ್ ಜಿಲ್ಲೆಯ ಮಾಂಜ್ರ, ಕಾರಂಜಾಕಣಿವೆ ಪ್ರದೇಶ, ಮಲೆನಾಡು, ಅರೆಮಲೆನಾಡು ಪ್ರದೇಶ ದಾವಣಗೆರೆ, ಶಿವಮೊಗ್ಗ, ಚಿಕ್ಕಮಗಳೂರು, ಹಾಸನ ಜಿಲ್ಲೆ ಹಾಗೂ ತುಮಕೂರು ಜಿಲ್ಲೆಯ ಶಿಂಷಾ, ಪೆನ್ನಾರ್ ನದಿ ಪ್ರಾಂತ್ಯಗಳಲ್ಲಿ ದೊರೆತಿರುವ ಈ ಸಂಸ್ಕೃತಿಯ ವಿಸ್ತೃತ ಬೆಳವಣಿಗೆಗೆ ಹಾಗೂ ಪ್ರಸರಣದ ಬಗೆಗೆ ತಿಳಿಯಲು ಸಹಾಯಕವಾಗಿವೆ.[೨೮]

೧೯೬೫ ರಲ್ಲಿ ಪುಣೆ ಡೆಕ್ಕನ್ ಕಾಲೇಜಿನ ತಂಡದವರು ಬಳ್ಳಾರಿ ಜಿಲ್ಲೆಯ ಸಂಗನಕಲ್ಲು ಬಳಿ ಈ ಕಾಲಘಟ್ಟಕ್ಕೆ ಸಂಬಂಧಿಸಿದ ನೆಲೆಯನ್ನು ಬೆಳಕಿಗೆ ತಂದರು ಅಲ್ಲದೇ ಉಪಕರಣ ತಯಾರಿಸುತ್ತಿದ್ದ ಕೈಗಾರಿಕೆ ನೆಲೆಯನ್ನು ಪತ್ತೆಹಚ್ಚಿದರು. ನಂತರ ಇದೇ ತಂಡವು ಬಳ್ಳಾರಿ ಸಮೀಪದ ಮೋಕ ರಸ್ತೆಯಲ್ಲಿರುವ ಬಂಗಲೆ ತೋಟದ ಹತ್ತಿರ ನಡೆಸಿದ ಉತ್ಖನನದಲ್ಲಿ ಚರ್ಟ್, ಕ್ವಾರ್ಜ್, ವೈಟ್‌ಕ್ವಾರ್ಜ್, ಶಿಲೆಯಲ್ಲಿ ತಯಾರಿಸಿದ ಉಪಕರಣಗಳು ಮತ್ತು ಇವುಗಳ ತಯಾರಿಕೆಗಾಗಿ ಬಳಸಿದ ಶಿಲಾಗಟ್ಟಿಗಳು ಕಂಡುಬಂದವು.[೨೯] ಈ ಕಾಲಘಟ್ಟಕ್ಕೆ ಸಂಬಂಧಿಸಿದ ನೆಲೆಗಳಾದ ಹಂಪಿ ಪರಿಸರದ ಕುಡುತಿನಿ, ಸಂಗನಕಲ್ಲು, ಕಾರಿಗನೂರು, ಗಾದಿಗನೂರು, ತಿಮ್ಮಲಾಪುರ, ಸಣಾಪುರ, ಭುವನಹಳ್ಳಿ, ಹಂಪಿ, ಅಪ್ಪಲಾಪುರ, ಅಯ್ಯನಹಳ್ಳಿ, ಕುರೆಕುಪ್ಪ ಕೋದಾಳು, ತೋರಣಗಲ್ಲು, ಮಲ್ಲಾಪುರ, ರಾಂಪುರ, ಮಾಡಲಗೆರೆ ಮುಂತಾದ ಸ್ಥಳಗಳಲ್ಲಿ ಈ ಹಂತದ ನೆಲೆಗಳನ್ನು ವಿದ್ವಾಂಸರು ಬೆಳಕಿಗೆ ತಂದಿದ್ದಾರೆ.

**೩. ನವಶಿಲಾಯುಗ ಸಂಸ್ಕೃತಿ (Neolethic Culture)**

ಮಾನವನು ತನ್ನ ಅಗತ್ಯಕ್ಕೆ ಅನುಸಾರವಾಗಿ ಆಯುಧೋಪಕರಣಗಳನ್ನು ಉಜ್ಜಿ ನಯಗೊಳಿಸಿ ಅದರ ಸೌಂದರ್ಯವನ್ನು ವೃದ್ಧಿಸಿದ್ದರಿಂದ ಈ ಯುಗವನ್ನು ನವಶಿಲಾಯುಗ ಎಂದು ಕರೆಯಲಾಗಿದೆ.

ಗ್ರೀಕ್ ಭಾಷೆಯಲ್ಲಿ 'ನಿಯೋ' ಎಂದರೆ; ನವೀನ/ಹೊಸದು ಎಂತಲು 'ಲೆಥಿಕ್' ಎಂದರೆ, ಶಿಲೆ ಎಂಬ ಅರ್ಥವಿದೆ. ಈ ಹಂತದಲ್ಲಿ ಆದಿಮ ಜನರ ರೀತಿನೀತಿಗಳು ಸಾಕಷ್ಟು ಸುಧಾರಿಸಿದ್ದರಿಂದ ಮತ್ತು ಆಯುಧಗಳನ್ನು ಉಜ್ಜಿನಯಗೊಳಿಸಿ ಬಳಸುತ್ತಿದ್ದರಿಂದ ಈ ಸಂಸ್ಕೃತಿಯನ್ನು ನೂತನ ಶಿಲಾಯುಗ ಅಥವಾ ನವಶಿಲಾಯುಗ (ನಿಯೋಲೆಥಿಕ್ ಕಲ್ಚರ್) ಎಂದು ಕರೆಯಲಾಗಿದೆ. ಈ ಕಾಲಘಟ್ಟವನ್ನು ಕುರಿತಂತೆ ಗೋಲ್ಡನ್ ಚೈಲ್ಡರವರು ಕ್ರಾಂತಿಕಾರಕ ಕಾಲಘಟ್ಟ ಎಂದು ಕರೆದಿದ್ದಾರೆ.[೩೦]

ಈ ಹಂತದಲ್ಲಿ ಮಾನವನು ಅಲೆಮಾರಿ ಜೀವನದಿಂದ ಮುಕ್ತನಾಗಿ ಒಂದೆಡೆ ನೆಲೆಸಿ ಬೇಸಾಯ ಹಾಗೂ ಪಶುಪಾಲನೆಯನ್ನು ಆರಂಭಿಸಿ ಆಹಾರ ಉತ್ಪಾದನೆಯಲ್ಲಿ ತೊಡಗಿ ನಿಸರ್ಗವನ್ನು ತನ್ನ ಅನುಕೂಲಕ್ಕೆ ತಕ್ಕಂತೆ ಉಪಯೋಗಿಸಿಕೊಳ್ಳಲು ಪ್ರಯತ್ನಿಸಿದ್ದನ್ನು ಕಾಣುತ್ತೇವೆ.

ಕರ್ನಾಟಕದಲ್ಲಿ ನೂತನ ಶಿಲಾಯುಗ ಸಂಸ್ಕೃತಿಗೆ ಸಂಬಂದಿಸಿದಂತೆ ಸಂಶೋಧನೆಗಳು ಮೊಟ್ಟ ಮೊದಲಿಗೆ ೧೮೭೨ ರಲ್ಲಿ ಶೋಧಿತವಾದವು. ಬಳ್ಳಾರಿ ಜಿಲ್ಲೆಯ ಕಪ್ಪಗಲ್ಲು ಬೆಟ್ಟದಲ್ಲಿ ವಿದ್ವಾಂಸರಾದ ವಿಲಿಯಂ ಪ್ರೇಸರ್‌ವರು ಈ ಕಾಲಘಟ್ಟದ ನೆಲೆಯನ್ನು ಶೋಧಿಸಿದರು. ಬಳ್ಳಾರಿ ಜಿಲ್ಲೆಯಲ್ಲಿ ೬೦ ನೆಲೆಗಳನ್ನು ಪುರಾತತ್ವಜ್ಞರು ಇದುವರೆಗೆ ಗುರುತಿಸಿದ್ದಾರೆ. ಅದರಲ್ಲಿ ಪ್ರಮುಖವಾದ ನೆಲೆ 'ಸಂಗನಕಲ್ಲು' ಆಗಿದೆ.[೩೧] ಮತ್ತು ಪ್ರಸ್ತುತ ಅಧ್ಯಯನ ಕ್ಷೇತ್ರದಲ್ಲೂ ಸಹ ಈ ಸಂಸ್ಕೃತಿಗೆ ಸೇರಿದ ೧೦ಕ್ಕೂ ಹೆಚ್ಚು ನೆಲೆಗಳನ್ನು ವಿದ್ವಾಂಸರು ಅನ್ವೇಷಣೆಯ ಮೂಲಕ ಬೆಳಕಿಗೆ ತಂದಿದ್ದಾರೆ. ಅವುಗಳಲ್ಲಿ ಅಪ್ಪೇನಹಳ್ಳಿ, ಬೆಳಗಟ್ಟ, ಟಿ.ಕಲ್ಲಹಳ್ಳಿ, ಸಿಡೇಗಲ್ಲು, ಪೇಟೆನಹಳ್ಳಿ,[೩೨] ನರಸಿಂಹನಗಿರಿ, ರಾಮದುರ್ಗ, ಕರಡಿಹಳ್ಳಿ, ಹುರುಳಿಹಾಳ್ ಬಳಿ ಈ ಸಂಸ್ಕೃತಿಗೆ ಸೇರಿದ ನೆಲೆಗಳನ್ನು ಸಂಶೋಧಕರು ಪತ್ತೆ ಹಚ್ಚಿದ್ದಾರೆ.

ಬೆಳಗಟ್ಟ, ರಾಮದುರ್ಗ ನೆಲೆಗಳಲ್ಲಿ ಈ ಸಂಸ್ಕೃತಿಗೆ ಸಂಬಂಧಿಸಿದ ಕೊಡಲಿ, ಬೀಸುವ ಕಲ್ಲು, ಚಕ್ಕೆ ಕಲ್ಲು ಉಪಕರಣಗಳ ಜೊತೆಗೆ ಹೆರೆಚಕ್ಕೆ ಮತ್ತು ಶಂಕುವಿನ ಆಭರಣಗಳು ದೊರೆತಿವೆ. ಕಲ್ಲಹಳ್ಳಿಯಲ್ಲಿ ಹಾಳಾಗಿರುವ ಬೂದಿ ದಿಬ್ಬವನ್ನು, ಉಪಕರಣ ಮತ್ತು ಮಡಿಕೆ ಭಾಗಗಳು, ವರ್ಣ ಚಿತ್ರಗಳನ್ನು ಶೋಧಿಸಲಾಗಿದೆ. ಹಾಗೂ ಗುಡೇಕೋಟೆಯಲ್ಲಿಯೂ ಸಹ ಈ ಸಂಸ್ಕೃತಿಗೆ ಸೇರಿದ ಮಡಿಕೆ ಚೂರು ಮತ್ತು ವರ್ಣಚಿತ್ರ ಪತ್ತೆಹಚ್ಚಲಾಗಿದೆ. ಈ ತಾಲೂಕಿನ ಜರಿಮಲೆಯ ಬಾಗೇಶ್ವರ ದೇವಾಲಯದ ಬಳಿ ನವಶಿಲಾಯುಗ ಸಂಸ್ಕೃತಿಗೆ ಸೇರಿದ ಡೈಕ್ ಶಿಲೆಯಿಂದ ತಯಾರಿಸಲಾದ ಕೊಡಲಿ ಹಾಗೂ ತ್ರುಟಿತ ಕೊಡಲಿ ಮತ್ತು ಬೂದು, ಕಪ್ಪು, ಕೆಂಪು ಬಣ್ಣದ ಮಡಿಕೆ ಚೂರುಗಳನ್ನು ವಿದ್ವಾಂಸರು ಗುರುತಿಸಿದ್ದಾರೆ. ಇವುಗಳಲ್ಲಿ ಸಣ್ಣ ಬಟ್ಟಲಾಕಾರದ ಕಂಟದ ಭಾಗಗಳು ಪ್ರಮುಖವಾಗಿವೆ.[೩೩]

ಜರಿಮಲೆಯಲ್ಲಿ ದೊರೆತಿರುವ ಶಿಲಾಯುಧದ ಬಾಯಿಯ ಭಾಗವನ್ನು ಹರಿತಗೊಳಿಸಿಲ್ಲ ಮತ್ತು ಸುತ್ತಲೂ ಅದನ್ನು ಹೆಚ್ಚಿನ ಮಟ್ಟದಲ್ಲಿ ಉಜ್ಜಿ ನುಣುಪುಗೊಳಿಸಿಲ್ಲ. ಆದರೆ ಇದರ ಮೇಲೆ ಕೈ ಬೆರಳುಗಳ ಗುರುತುಗಳು ಮಾತ್ರ ಮೂಡಿವೆ. ಇದರ ಉದ್ದ ೧೫ ಸೆ.ಮೀ, ಅಗಲ ೬ ಸೆ.ಮೀ ಇದ್ದು, ಬಾಯಿ ಭಾಗ ೪ ಸೆ.ಮಿ. ಇದೆ. ಈ ಶಿಲಾಯುಧವನ್ನು ಸುತ್ತಿಗೆಯ ರೀತಿಯಲ್ಲಿ ಹೊಡೆಯಲು ಉಪಯೋಗಿಸಿರುವ ಸಾಧ್ಯತೆಯಿದೆ. ಹಾಗೂ ಇಲ್ಲಿಯೇ ದೊರೆತಿರುವ ಮತ್ತೊಂದು ಶಿಲಾಯುಧವನ್ನು ಸಹ ಡೈಕ್ ಶಿಲೆಯಿಂದ ತಯಾರಿಸಿದ್ದು, ಇದನ್ನು ಸುತ್ತಲೂ ಉಜ್ಜಿ ನಯಗೊಳಿಸಲಾಗಿದೆ. ತ್ರುಟಿತವಾಗಿರುವ ಈ ಶಿಲಾ ಕೊಡಲಿಯ ಕೊನೆಯ ಭಾಗ (ಚೂಪಾಗಿರುವ ಭಾಗ) ಮಾತ್ರ ಉಳಿದುಕೊಂಡಿದ್ದು ಇದರ ಉದ್ದ ೬ ಸೆ.ಮೀ. ಅಗಲ ೫ ಸೆ.ಮೀ ಆಗಿದ್ದು.[೩೪] ಇದನ್ನು ಆ ಕಾಲದ ಮಾನವ ತನ್ನ ದಿನನಿತ್ಯದ ಕೆಲಸಗಳಿಗೆ ಬಳಸಿಕೊಂಡಿದ್ದಾನೆ ಎಂದು ಹೇಳಬಹುದು.

ಒಟ್ಟಿನಲ್ಲಿ ಈ ಸಂಸ್ಕೃತಿಯ ಕಾಲಮಾನವನ್ನು ವಿವಿಧ ಅಂತರ್ ವೈಜ್ಞಾನಿಕ ಸಂಶೋಧನೆಯ ಮೂಲಕ ನಿರ್ಧರಿಸಲಾಗಿದ್ದು. ಕ್ರಿ.ಪೂ. ೨೦೦೦ದಿಂದ ೧೦,೦೦೦ ದ ವರೆಗೆ ಅಸ್ತಿತ್ವದಲ್ಲಿತ್ತು ಎಂದು ತಿಳಿಯಲಾಗಿದೆ.

**೪. ಶಿಲಾ–ತಾಮ್ರಯುಗ ಸಂಸ್ಕೃತಿ (Chalcolethic culture)**

ನೂತನ ಶಿಲಾಯುಗ ಸಂಸ್ಕೃತಿಯ ನಂತರ ವಿಕಾಸಗೊಂಡ ಹಂತ ಶಿಲಾ ತಾಮ್ರಯುಗ ಸಂಸ್ಕೃತಿಯಾಗಿದೆ. ಮಾನವನು ಕಲ್ಲನ್ನು ಹೊರತುಪಡಿಸಿ ಮೊಟ್ಟ ಮೊದಲ ಬಾರಿಗೆ ಬಳಸಿದ ಲೋಹ ತಾಮ್ರವಾದ್ದರಿಂದ ಈ ಕಾಲಘಟ್ಟವನ್ನು "ಶಿಲಾ–ತಾಮ್ರಯುಗ ಸಂಸ್ಕೃತಿ" ಎಂದು ಕರೆಯಲಾಗುತ್ತದೆ.[೩೫] ಈ ಕಾಲಾವಧಿಯಲ್ಲಿ ಮಾನವ ತಾಮ್ರದ ಅದಿರಿನಿಂದ ಲೋಹವನ್ನು ತಯಾರಿಸಿ ಅದರಿಂದ ಆಭರಣ, ಗೊಂಬೆ, ಆಯುಧ ಉಪಕರಣ ಮೊದಲಾದ ವಸ್ತುಗಳನ್ನು ತಯಾರು ಮಾಡಲಾಗುತ್ತಿತ್ತು. ಈ ಹಂತದ ಜನ ಜೀವನದಲ್ಲಿ ಕಾಣುವ ಖಚಿತ ಬೆಳವಣಿಗೆ

ಎಂದರೆ, ಶಿಲಾಯುಧಗಳ ಜೊತೆಗೆ ತಾಮ್ರ ಅಥವಾ ಕಂಚಿನ ಉಪಕರಣಗಳ ತಯಾರಿಸುವ ತಂತ್ರಗಾರಿಕೆ ಬೆಳಕಿಗೆ ಬಂದಿದ್ದಾಗಿದೆ.

ಭಾರತದಲ್ಲಿ ಈ ಸಂಸ್ಕೃತಿಗೆ ಸೇರಿದ ಅನೇಕ ನೆಲೆಗಳು ಆವಿಷ್ಕಾರಗೊಂಡಿವೆ. ಹರಪ್ಪ ಸಂಸ್ಕೃತಿಯಲ್ಲಿ ತಾಮ್ರದಿಂದ ತಯಾರಿಸಿದ ವಿವಿಧ ನಮೂನೆಯ ಆಯುಧೋಪಕರಣಗಳು ಸಂಶೋಧನೆಯ ಮೂಲಕ ಪುರಾತತ್ವಜ್ಞರು ಬೆಳಕಿಗೆ ತಂದಿದ್ದಾರೆ. ಹಾಗೆಯೇ ಕರ್ನಾಟಕದ ಅನೇಕ ಭಾಗಗಳಲ್ಲಿ ಈ ಸಂಸ್ಕೃತಿಗೆ ಸಂಬಂಧಪಟ್ಟ ನೆಲೆಗಳು ದೊರಕಿವೆ.

ಶಿಲಾ–ತಾಮ್ರಯುಗದ ಜನರು ಬಳಸುತ್ತಿದ್ದಂತಹ ವಿವಿಧ ಮಾದರಿ ಮಡಿಕೆ ಕುಡಿಕೆಗಳನ್ನು ಪುರಾತತ್ವಜ್ಞರು ಸಂಶೋಧನೆ ಮತ್ತು ಅನ್ವೇಷಣೆಯ ಮೂಲಕ ಪತ್ತೆ ಹಚ್ಚಿದ್ದಾರೆ. ಇವುಗಳಲ್ಲಿ ವರ್ಣರೇಖಾ ಚಿತ್ರಗಳನ್ನು ಒಳಗೊಂಡಿರುವ ಪಾತ್ರೆಗಳ ಮೇಲೆ ಕೆಲವೊಂದು ಪ್ರಾಣಿಯ ಚಿತ್ರಗಳನ್ನು ರಚಿಸಲಾಗಿದೆ. ಹಾಗೂ ಮಣ್ಣಿನ ಪಾತ್ರೆಗಳ ರಚನೆ ತುಂಬ ಹೊಳಪನ್ನು ಹೊಂದಿರುವುದು ಈ ಸಂಸ್ಕೃತಿಯ ವೈಶಿಷ್ಟ್ಯವೆನಿಸಿದೆ.

ಬಳ್ಳಾರಿ ಜಿಲ್ಲೆಯಲ್ಲಿ ಕುಡುತಿನಿ, ಗಂಡಿ ಓಬಳಾಪುರ, ಸಂಗನಕಲ್ಲು, ಕುರುಗೋಡು, ಕಪ್ಪಗಲ್ಲು, ಬಳ್ಳಾರಿ, ಗಾದಿಗನೂರು, ವೆಂಕಟಾಪುರ, ಹಂಪಿ, ನಿಂಬಾಪುರ, ಬೆಳಗಲ್ಲು, ಬೆಳಗೋಡು, ಹಲಕುಂದಿ, ತೆಕ್ಕಲಕೋಟೆ, ದರೋಜಿ, ಭೈರ ನಾಯಕನಹಳ್ಳಿ, ರಾಜಾಪುರದಲ್ಲಿ ಈ ಸಂಸ್ಕೃತಿಯ ಅವಶೇಷಗಳು ದೊರೆತಿವೆ. ಇದೇ ರೀತಿ ಪ್ರಸ್ತುತ ಅಧ್ಯಯನ ಪ್ರದೇಶವಾದ ತಾಲೂಕಿನ ಅಪ್ಪಯ್ಯನಹಳ್ಳಿಯ ಗವಿಗಳಲ್ಲಿ ವರ್ಣಚಿತ್ರಗಳು ಕಂಡುಬಂದಿವೆ.[೩೬] ಮತ್ತು ಕಲ್ಲಹಳ್ಳಿಯಲ್ಲಿಯು ಸಹ ಈ ಸಂಸ್ಕೃತಿಯ ಉಪಕರಣ, ಮಡಕೆಯ ಭಾಗಗಳು ಹಾಗೂ ವರ್ಣ ಚಿತ್ರಗಳನ್ನು ಪುರಾತತ್ವಜ್ಞರು ಶೋಧಿಸಿದ್ದಾರೆ.

ಹೀಗೆ ಕೂಡ್ಲಿಗಿ ತಾಲೂಕು ಪರಿಸರದಲ್ಲಿ ಮಾನವ ಹಳೆಶಿಲಾಯುಗದಿಂದ ಇಂದಿನ ವರೆಗೂ ವಾಸಿಸುತ್ತಾ ಬಂದಿರುವುದು ಈ ಅಧ್ಯಯನದಿಂದ ತಿಳಿದುಬರುತ್ತದೆ. ಒಟ್ಟಿನಲ್ಲಿ ಕೂಡ್ಲಿಗಿ ತಾಲೂಕು ಪರಿಸರದಲ್ಲಿ ಹಲವು ರೀತಿಯ ಪ್ರಾಗೈತಿಹಾಸಿಕ ಕುರುಹುಗಳು ದೊರಕಿರುವುದರಿಂದ ಈ ಪ್ರದೇಶವು ಪ್ರಾಗೈತಿಹಾಸಿಕ ಮಹತ್ವವನ್ನು ಪಡೆದಿರುವುದು ಗಮನಾರ್ಹವಾಗಿದೆ.

**ಅಡಿಟಿಪ್ಪಣಿಗಳು**

೧. ರವಿ ಎನ್.ಎಮ್., ಮತ್ತು ವೃಷಬೇಂದ್ರಚಾರ್ಯ.ಎ., ಮುನ್ನಡೆಯಲ್ಲಿ ಕೂಡ್ಲಿಗಿ ಪು.ಸಂ,೧

೨. ಚಂದ್ರಶೇಖರಯ್ಯ ಬಿ.ಎಮ್., ಕೂಡ್ಲಿಗಿ ತಾಲೂಕು ದರ್ಶನ, ಪು.ಸಂ, ೧

೩. ರವಿ ಎನ್.ಎಮ್., ಮತ್ತು ವೃಷಬೇಂದ್ರಾಚಾರ್ಯ ಎ., ಪೂರ್ವೋಕ್ತ. ಪು.ಸಂ, ೧

೪. ಅವರ್ ಹೀರೋ. ಇನ್

೫. ಚಂದ್ರಶೇಖರಯ್ಯ ಬಿ.ಎಮ್., ಪೂರ್ವೋಕ್ತ, ಪು.ಸಂ, ೬

೬. ಅದೇ, ಪೂರ್ವೋಕ್ತ, ಪು.ಸಂ,೫

೭. ಅದೇ, ಪೂರ್ವೋಕ್ತ, ಪು.ಸಂ, ೬

೮. ಅದೇ, ಪೂರ್ವೋಕ್ತ, ಪು.ಸಂ, ೨೯

೯. ರವಿ ಎನ್.ಎಮ್., ಮತ್ತು ವೃಷಬೇಂದ್ರಾಚಾರ್ಯ. ಎ., ಪೂರ್ವೋಕ್ತ. ಪು.ಸಂ, ೧

೧೦. ಚಂದ್ರಶೇಖರಯ್ಯ ಬಿ.ಎಮ್., ಪೂರ್ವೋಕ್ತ, ಪು.ಸಂ, ೭

೧೧. ರವಿ ಎನ್.ಎಮ್., ಮತ್ತು ವೃಷಬೇಂದ್ರಾಚಾರ್ಯ. ಎ., ಪೂರ್ವೋಕ್ತ. ಪು.ಸಂ, ೧

೧೨. ಸೂರ್ಯನಾಥ್ ಕಾಮತ್, ಕರ್ನಾಟಕ ರಾಜ್ಯ ಗೆಜೆಟಿಯರ್ ಭಾಗ-೩ ಪು.ಸಂ, ೪೮೬

೧೩. ಕರಿಸಬಸಪ್ಪ ಎ., ಬಳ್ಳಾರಿ ಜಿಲ್ಲಾ ಐತಿಹ್ಯಗಳು. ಪು.ಸಂ, ೯೨

೧೪. ಕುಂಬಾಸ, ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ, ಪು.ಸಂ, ೪೭

೧೫. ಗುರುಮೂರ್ತಿ ಪೆಂಡಕೂರ, ಬಳ್ಳಾರಿಜಿಲ್ಲೆಯ ಸ್ಥಳನಾಮಗಳು, ಪು.ಸಂ, ೩೧

೧೬. ಸುಂದರ ಅ., ಕರ್ನಾಟಕ ಚರಿತ್ರೆ ಸಂಪುಟ-೧, ಪು.ಸಂ, ೨೪೧

೧೭. ಅದೇ, ಪೂರ್ವೋಕ್ತ ಪು.ಸಂ, ೯೫

೧೮. ಅದೇ, ಪೂರ್ವೋಕ್ತ ಪು.ಸಂ, ೧೦೭

೧೯. ಶಿವತಾರಕ್ ಕೆ.ಬಿ., ಕರ್ನಾಟಕದ ಪುರಾತತ್ವ ನೆಲೆಗಳು, ಪು.ಸಂ, ೪

೨೦. ತಿಪ್ಪೇಸ್ವಾಮಿ ಹೆಚ್., ಕೂಡ್ಲಿಗಿ ತಾಲೂಕಿನಲ್ಲಿ ಪ್ರಾಗೈತಿಹಾಸಿಕ ನೆಲೆಗಳು, ಇತಿಹಾಸ ದರ್ಶನ (ಸಂ,೧೬) ಪು.ಸಂ, ೧

೨೧. ಸುಂದರ ಅ., ಪೂರ್ವೋಕ್ತ, ಪು.ಸಂ, ೧೪೧

೨೨. ಅದೇ, ಪೂರ್ವೋಕ್ತ, ಪು.ಸಂ, ೧೧೬

೨೩. ಅದೇ, ಪೂರ್ವೋಕ್ತ, ಪು.ಸಂ, ೧೨೩

೨೪. ಅದೇ, ಪೂರ್ವೋಕ್ತ, ಪು.ಸಂ, ೧೨೪

೨೫. ತಿಪ್ಪೇಸ್ವಾಮಿ ಹೆಚ್., ಪೂರ್ವೋಕ್ತ, ಪು.ಸಂ, ೩

೨೬. ಭೀಮ ಸಮುದ್ರ ರಂಗನಾಥ, ಕೂಡ್ಲಿಗಿ ತಾಲೂಕಿನ ಪುರಾತತ್ವ ನೆಲೆಗಳು (ಅಪ್ರಕಟಿತ ಕೃತಿ)

೨೭. ಸುಂದರ ಅ., ಪೂರ್ವೋಕ್ತ, ಪು.ಸಂ, ೧೨೪

೨೮. ಅದೇ, ಪೂರ್ವೋಕ್ತ, ಪು.ಸಂ, ೧೨೫

೨೯. ಅದೇ, ಪೂರ್ವೋಕ್ತ, ಪು.ಸಂ, ೧೩೯

೩೦. ಇರ್ಫಾನ್ ಹಬೀಬ್, ಪೂರ್ವೇತಿಹಾಸ, ಪು.ಸಂ, ೮೦

೩೧. ಶಿವತಾರಕ್ ಕೆ.ಬಿ., ಪೂರ್ವೋಕ್ತ, ಪು.ಸಂ, ೩೫೭

೩೨. ಭೀಮ ಸಮುದ್ರ ರಂಗನಾಥ, ಪೂರ್ವೋಕ್ತ, ಪು.ಸಂ, ೧೧

೩೩. ತಿಪ್ಪೇಸ್ವಾಮಿ ಹೆಚ್, ಪೂರ್ವೋಕ್ತ, ಪು.ಸಂ, ೨

೩೪. ಅದೇ, ಪೂರ್ವೋಕ್ತ, ಪು.ಸಂ, ೨

೩೫. ಶರ್ಮ ಆರ್.ಎಸ್., ಪ್ರಾಚೀನ ಭಾರತ, ಪು.ಸಂ, ೪೨

೩೬. ಸುಂದರ ಅ., ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ, ಪು.ಸಂ, ೬೮

# ಅಧ್ಯಾಯ ಮೂರು

# ಕೂಡ್ಲಿಗಿ ತಾಲ್ಲೂಕಿನ ಬೃಹತ್ ಶಿಲಾಯುಗದ ನೆಲೆಗಳು

---

೩.೧ ಬೃಹತ್ ಶಿಲಾಯುಗ ಸಂಸ್ಕೃತಿ

೩.೨ ಬೃಹತ್ ಶಿಲಾಯುಗದ ನೆಲೆಗಳು ಮತ್ತು ಅವುಗಳ ಸ್ವರೂಪ

# ಅಧ್ಯಾಯ : ಮೂರು

## ಕೂಡ್ಲಿಗಿ ತಾಲೂಕಿನ ಬೃಹತ್ ಶಿಲಾಯುಗ ಸಂಸ್ಕೃತಿ

ಭಾರತದ ಪ್ರಾಗಿತಿಹಾಸದ ಅಧ್ಯಯನದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿ ಅಧ್ಯಯನವು ಮಹತ್ವ ಪಡೆದಿರುವುದು ಗಮನಾರ್ಹ. ಭಾರತದಲ್ಲಿ ಪ್ರಾಗಿತಿಹಾಸದ ಅಧ್ಯಯನ ೧೯ನೇ ಶತಮಾನದಲ್ಲಿ ಆರಂಭವಾಯಿತೆಂದು ಹೇಳಬಹುದು. ಬೃಹತ್ ಶಿಲಾಯುಗ ಸಂಸ್ಕೃತಿಯನ್ನು ಅರಿಯಲು ವಿವಿಧ ಬಗೆಯ ಶಿಲಾ ಸಮಾಧಿಗಳು, ಕಬ್ಬಿಣದ ಆಯುಧೋಪಕರಣಗಳು ಮತ್ತು ಉತ್ಖನನ ವರದಿಗಳು ಪ್ರಮುಖ ಆಕರಗಳಾಗಿವೆ. ಭಾರತದಲ್ಲಿ ಪ್ರಪ್ರಥಮ ಬಾರಿಗೆ ೧೮೨೩ರಲ್ಲಿ ಬ್ಯಾಬಿಂಗಟನ್‌ರವರು ಕೇರಳದ ಕರಾವಳಿ ಪ್ರದೇಶದಲ್ಲಿ ಅವಶೇಷಗಳನ್ನು ಪತ್ತೆಹಚ್ಚುವುದರ ಮೂಲಕ ಬೃಹತ್‌ಶಿಲಾಯುಗ ಸಂಸ್ಕೃತಿ ಅಧ್ಯಯನ ಆರಂಭಮಾಡಿದರು.[೧] ಇದೇ ರೀತಿ ಕರ್ನಾಟಕದಲ್ಲೂ ಸಹ ಈ ಸಂಸ್ಕೃತಿಯ ಅಧ್ಯಯನವನ್ನು ಪ್ರಥಮಬಾರಿಗೆ ಮೆಡೋಸ್ ಟೇಲರ್ ಮತ್ತು ಮೊಗ್ಲಿಂಗ್ ಮೊದಲಾದವರು ೧೮೫೧ ರಿಂದ ೧೮೭೨ ರವರೆಗೆ ಗುಲ್ಬರ್ಗ, ಬಳ್ಳಾರಿ, ರಾಯಚೂರು ಜಿಲ್ಲೆಗಳಲ್ಲಿ ಈ ಸಂಸ್ಕೃತಿಗೆ ಸಂಬಂಧಿಸಿದ ಕುರುಹುಗಳನ್ನು ಪತ್ತೆಹಚ್ಚುವುದರ ಮೂಲಕ ಪ್ರಾರಂಭಿಸಿದರು. ಇವು ಮುಂದೆ ಈ ಸಂಸ್ಕೃತಿಯ ಬಗ್ಗೆ ಹೆಚ್ಚಿನ ಅಧ್ಯಯನ ಹಾಗೂ ಸಂಶೋಧನೆ ಕೈಗೊಳ್ಳುವಿಕೆಗೆ ನೆರವಾದವು.

### ೩.೧. ಬೃಹತ್ ಶಿಲಾಯುಗ ಸಂಸ್ಕೃತಿ

ಆದಿಮ ಸಮಾಜದ ಜನರು ವಿವಿಧ ಕಾಲ ಘಟ್ಟಗಳಲ್ಲಿ ನಿತ್ಯ ಬದುಕಿಗಾಗಿ ನಿರಂತರ ಅಲೆದಾಡುತ್ತಿದ್ದರು ಆದರೆ ನವಶಿಲಾಯುಗದ ವೇಳೆಗೆ ಒಂದು ಕಡೆ ನೆಲೆ ನಿಂತು ಆರಂಭಿಕ ಕೃಷಿಯಲ್ಲಿ ತೊಡಗಿ ಬೃಹತ್‌ಶಿಲಾಯುಗದ ವೇಳೆಗೆ ಅದರಲ್ಲಿ ಯಶಸ್ವಿಯನ್ನು ಪಡೆದು ಸ್ವಾವಲಂಭಿಯಾಗಿ ಬದುಕುವುದನ್ನು ಕಲಿತುಕೊಂಡರು.

ಬೃಹತ್ ಶಿಲಾಯುಗ ಸಂಸ್ಕೃತಿ ಎಂಬ ಕನ್ನಡ ಪದವು ಆಂಗ್ಲ ಭಾಷೆಯ ಮೆಗಲೆಥಿಕ್ ಕಲ್ಚರ್ ಎಂಬ ಪದಕ್ಕೆ ಸಮವಾಗಿದೆ. ಮೆಗಲೆಥಿಸ್ ಎಂಬ ಪದವು ಗ್ರೀಕ್‌ನ ಮೆಗಾ ಮತ್ತು ಲೆಥಿಸೋ ಎಂಬ ಎರಡು ಪದಗಳಿಂದ ನಿಷ್ಪತ್ತಿಯಾಗಿದೆ. ಮೆಗಾ ಎಂದರೆ, ಬೃಹತ್ ಎಂತಲೂ ಲೆಥಿಸೋ ಎಂದರೆ, ಕಲ್ಲು (ಶಿಲೆ) ಎಂದರ್ಥವಾಗಿದೆ.[೨]

ಈ ಕಾಲದ ಜನರು ಮರಣ ಹೊಂದಿದಾಗ ವ್ಯಕ್ತಿಯ ಶವವನ್ನು ದೊಡ್ಡ ದೊಡ್ಡ ಕಲ್ಲುಗಳನ್ನು ಬಳಸಿ ಕಲ್ಗೋರಿಗಳನ್ನು ನಿರ್ಮಿಸಿ ಅದರಲ್ಲಿಟ್ಟು ಹೂಳುತ್ತಿದ್ದರಿಂದ ಈ ಸಂಸ್ಕೃತಿಗೆ "ಬೃಹತ್ ಶಿಲಾಯುಗ ಸಂಸ್ಕೃತಿ" ಎಂದು ಕರೆಯಲಾಗುತ್ತದೆ. ಈ ಸಂಸ್ಕೃತಿಯು ಶಿಲಾ-ತಾಮ್ರಯುಗದ ನಂತರ ಪ್ರಚಲಿತಕ್ಕೆ ಬಂದಿತು.

ಭಾರತದ ಮಟ್ಟಿಗೆ ಬೃಹತ್ ಶಿಲಾಯುಗವು ಒಟ್ಟಾರೆಯಾಗಿ ವಿವಿಧ ಪ್ರದೇಶ ಹಾಗೂ ವಿಭಿನ್ನ ಕಾಲಘಟ್ಟಗಳಲ್ಲಿ ಹೇಗೆ ಬೆಳೆದು ಬಂದಿದೆ ಎಂದು ತಿಳಿಯಲು ಆಯಾ ಪ್ರದೇಶ ಮತ್ತು ಕಾಲಘಟ್ಟಗಳ ಸ್ಥಳ ಪರಿಶೋಧನೆ ಮಾಡುವುದು. ಈ ಸಂಸ್ಕೃತಿಯ ಅವಶೇಷಗಳನ್ನು ಪತ್ತೆಹಚ್ಚಿದ ದಿನದಿಂದ ಇಂದಿನವರೆಗೆ ದೇಶಿಯ ಹಾಗೂ ವಿದೇಶಿಯ ಪುರಾತತ್ವಜ್ಞರು ದೇಶದ ನಾನಾ ಭಾಗಗಳಲ್ಲಿ ಹೊಸ ಹೊಸ ನೆಲೆಗಳನ್ನು ಸಂಶೋಧನೆ ನಡೆಸುವುದರ ಮೂಲಕ ಈ ಜನರ ವಸತಿ, ಸಾಮಾಜಿಕ ಜೀವನ, ಆರ್ಥಿಕ ಜೀವನ, ಶವಸಂಸ್ಕಾರ ಪದ್ಧತಿ ಮತ್ತು ಇತರ ವಿಚಾರಗಳ ಮೇಲೆ ಬೆಳಕು ಚೆಲ್ಲಿದ್ದಾರೆ. ಆದರೂ ಸಹ ಎಲ್ಲರೂ ಒಪ್ಪುವಂತಹ ನಿಖರವಾದ ವಿಚಾರಗಳ ಬಗೆಗೆ ಸಂಶೋಧನೆ ನಡೆಯಬೇಕಾಗಿದೆ. ಈ ಸಂಸ್ಕೃತಿಯ ನೆಲೆಗಳನ್ನು ತಿಳಿಯುವ ಮೊದಲು ಅಂದಿನ ಸಮಾಜದ ಜೀವನವನ್ನು ತಿಳಿಯುವುದು ಬಹುಮುಖ್ಯವೆನ್ನಿಸುತ್ತದೆ.

**ಜೀವನ ಸಂಸ್ಕೃತಿ**

ಬೃಹತ್ ಶಿಲಾಯುಗದ ಜನರು ಬೆಟ್ಟದ ತಪ್ಪಲು ಮತ್ತು ಬೆಟ್ಟ ಪ್ರದೇಶಗಳಲ್ಲಿ ವರ್ತುಲಾಕಾರದ, ಆಯತಾಕಾರದ ಮಣ್ಣಿನ ತಡಕೆ ಗೋಡೆಗಳ ಹುಲ್ಲಿನ ಇಳಿಜಾರು ಮಾಡಿದ ಮನೆಗಳನ್ನು ನಿರ್ಮಿಸಿಕೊಂಡು ಜೀವನ ಸಾಗಿಸುತ್ತಿದ್ದರು. ಆ ಜನರು ಜೀವನ ನಿರ್ವಹಣೆಗಾಗಿ ಪಶು ಸಂಗೋಪನೆ, ಬೇಟೆಯಾಡುವುದು ಮತ್ತು ಕೃಷಿಯನ್ನು ಅವಲಂಬಿಸಿದ್ದರು. ಕೃಷಿಯು ಇವರ ಮುಖ್ಯ ಕಸುಬು ಆಗಿದ್ದರಿಂದ ಕಬ್ಬಿಣದ ನೇಗಿಲಕುಳ, ಕುಡಗೋಲು, ಭರ್ಚಿ, ಕತ್ತಿ, ಬಾಣದ ಮೊನೆಗಳು ಮತ್ತು ಇತರ ಆಯುಧೋಪಕರಣಗಳು ತಾವೇ ತಯಾರಿಸಿಕೊಳ್ಳುತ್ತಿದ್ದರು. ಇದಕ್ಕೆ ಪೂರಕವೆನ್ನುವಂತೆ 'ಹಿರೇಬೇಣಕಲ್‌ನಲ್ಲಿರುವ ಬೃಹತ್ ಶಿಲಾ ಸಮಾಧಿಯಲ್ಲಿ' ವಿಶೇಷವಾಗಿ ಒಂದನೇ ಗವಿ ವರ್ಣಚಿತ್ರದಲ್ಲಿ[೩] ನಾನಾ ಪ್ರಕಾರದ ಕಬ್ಬಿಣದ ಆಯುಧಗಳನ್ನು ಹಿಡಿದಿರುವ ಮನುಷ್ಯರು ಪ್ರಾಣಿಗಳನ್ನು ಬೇಟೆಯಾಡುವ ದೃಶ್ಯ ಮೊದಲಾದವುಗಳು ಇವರ ವೃತ್ತಿ ಮತ್ತು ಪ್ರೌವೃತ್ತಿಯನ್ನು ಸೂಚಿಸುತ್ತದೆ.

ಈ ಸಂಸ್ಕೃತಿಯ ಜನರಿಗೆ ಭತ್ತ, ರಾಗಿ, ಮೊದಲಾದ ಕಾಳುಕಡ್ಡಿಗಳ ಪರಿಚಯವಿತ್ತು ಎಂಬುದನ್ನು ಹೆಗ್ಗಡೆಹಳ್ಳಿಯ ಒಂದು ಶಿಲಾಸಮಾಧಿಯ ಮಣ್ಣಿನ ಪಾತ್ರೆಯಲ್ಲಿ ಭತ್ತದ ಹೊಟ್ಟು ಹಾಗೂ ರಾಗಿ ಕಾಳು ದೊರೆತಿವೆ. ಈ ಭಾಗದ ಕಲ್ಗೋರಿಗಳಲ್ಲಿ ದೊರೆತ ಅವಶೇಷಗಳಿಂದ ಜನರು ವಿವಿಧ ಪ್ರಾಣಿಗಳನ್ನು ಸಾಕುತ್ತಿದ್ದರು ಎಂಬುದು ತಿಳಿದುಬರುತ್ತದೆ. ಈ ಸಂಸ್ಕೃತಿಯ ಜನರು ಸರ್ವೇಸಾಮಾನ್ಯವಾಗಿ ಕುದುರೆಯನ್ನು ಬಳಸುತ್ತಿದ್ದರೆಂಬುದು ಜಡಿಗೇನ ಹಳ್ಳಿಯ ಶಿಲಾ

ಸಮಾಧಿಯಲ್ಲಿ ದೊರೆತ ಕುದುರೆ ಬಾಯಿಗೆ ಹಾಕುವ ಉಪಕರಣ ಮತ್ತು ಹಿರೇಬೆಣಕಲ್ಲಿನ ಗವಿವರ್ಣಚಿತ್ರದಲ್ಲಿ ಕುದುರೆ ಸವಾರಿಚಿತ್ರಗಳು ಸೂಚಿಸುತ್ತವೆ.

ಈ ಸಂಸ್ಕೃತಿಯ ಜನರು ತಕ್ಕಲಿಯಿಂದ ನೂಲುವುದು, ಚಾಪೆ ಹೆಣೆಯುವುದನ್ನು ಕಲಿತ್ತಿದ್ದರಿಂದ. ಇವು ಇವರ ಗೃಹಕೈಗಾರಿಕೆಗಳೆನಿಸಿವೆ. ಒಂದು ಶಿಲಾಸಮಾಧಿಯಲ್ಲಿ ದೊರೆತ ದೊಡ್ಡ ಗುಡಾಣದಂತಹ ಅಸ್ಥಿ ಪಾತ್ರೆಯಲ್ಲಿ (ತಳದಲ್ಲಿ) ಹೆಣೆದ ಚಾಪೆಯ ಮುದ್ರೆ ಇದೆ. ಪೋಣಿಸುವ ಮಣಿಗಳ ಸರವನ್ನು ಮಾಡುವುದು ಒಂದು ವಿಶಿಷ್ಟ ಉದ್ಯೋಗವಾಗಿತ್ತೆಂದು ತಿಳಿಯುತ್ತದೆ. ಬೃಹತ್ ಶಿಲಾಯುಗದ ಜನರ ಅತ್ಯಂತ ಪ್ರಮುಖ ಲಕ್ಷಣವೆಂದರೆ, ಕಬ್ಬಿಣದ ಅದಿರಿನಿಂದ ಲೋಹವನ್ನು ತಯಾರಿಸುವ ತಂತ್ರಜ್ಞಾನವನ್ನು ತಿಳಿದಿದ್ದರು. ಈ ತಂತ್ರಜ್ಞಾನ ಭಾರತದಾದ್ಯಂತ ಪಸರಿಸಿತು. 'ಒಂದು ಕೆ.ಜಿಯಷ್ಟು ಅದಿರಿನಿಂದ ಸು. ೩೫೦ ಗ್ರಾಂ ಪರಿಶುದ್ಧ ಕಬ್ಬಿಣವನ್ನು ಪಡೆಯುವ ಪರಿಣಿತಿ ಈ ಜನರು ಸಾದಿಸಿದ್ದರು ಎಂಬುದನ್ನು ವಿಶ್ವಾಸ ಗೋಗ್ಟೆಯವರ ನಾಯ್‌ಕುಂಡ' ಅಧ್ಯಯನದಿಂದ ತಿಳಿದುಬರುತ್ತದೆ.[೪] ಹೀಗೆ ಕಬ್ಬಿಣದ ಬಳಕೆಯನ್ನು ಕಂಡುಕೊಂಡ ಮಾನವ ಕಲ್ಲಿನ ಉಪಕರಣಗಳನ್ನು ತಯಾರಿಸುವುದನ್ನು ನಿಲ್ಲಿಸಿದ. ಇದರಿಂದ ಶಿಲಾಯುಗ ಸಂಪೂರ್ಣವಾಗಿ ಕೊನೆಗೊಂಡು 'ಲೋಹಯುಗ' ಪ್ರಾರಂಭವಾಯಿತು. ಈ ಕಾರಣದಿಂದಲೇ ದಕ್ಷಿಣ ಭಾರತದ ಈ ಬೃಹತ್ ಶಿಲಾಯುಗ ಸಂಸ್ಕೃತಿಯನ್ನು 'ಕಬ್ಬಿಣಯುಗ ಸಂಸ್ಕೃತಿ' ಎಂದು ಕರೆಯಲಾಯಿತು. ಬೃಹತ್ ಶಿಲಾಯುಗದ ಜನರು ಕಬ್ಬಿಣದ ಅದಿರನ್ನು ಕರಗಿಸಿರುವ ಅವಶೇಷಗಳನ್ನು ಕರ್ನಾಟಕದಲ್ಲಿ ಹಲುವು ಕಡೆ ಕಂಡು ಬಂದಿವೆ. ಅವುಗಳಲ್ಲಿ ಕೊಮಾರನಹಳ್ಳಿ, ತಡಕನಹಳ್ಳಿ, ಹಳಿಂಗಳಿ, ಗಾಜೂರು, ಹಳ್ಳೂರು[೫] ಮೊದಲಾದ ನೆಲೆಗಳಲ್ಲಿ ಮತ್ತು ಪ್ರಸ್ತುತ ಅಧ್ಯಯನ ಕ್ಷೇತ್ರವಾದ ಕೂಡ್ಲಿಗಿ ತಾಲೂಕಿನ ಹುರುಳಿಯಾಳ್, ತಿಮ್ಮವ್ವನಹಳ್ಳಿ, ಚಕ್ಕೆಮಂಡಿ, ನೆಲೆಗಳಲ್ಲೂ ಸಹ ಈ ಸಂಸ್ಕೃತಿಗೆ ಸಂಬಂಧಿಸಿದ ಕಬ್ಬಿಣದ ಕಿಟ್ಟ, ಕುಲುಮೆ ಅವಶೇಷಗಳು ದೊರೆತಿವೆ.

ಈ ಸಂಸ್ಕೃತಿಯ ಜನರು ಸಾಮಾನ್ಯವಾಗಿ ದಿನ ನಿತ್ಯ ಬಳಕೆಯ ಸಾಮಾನುಗಳಾಗಿ ಲೇಪನಯುಳ್ಳ ಪಾತ್ರೆಗಳು ಹಾಗೂ ತೆಳ್ಳನೆಯ ಲೇಪನವಿದ್ದ ಹೊಳಪು ರಹಿತ ಪಾತ್ರೆಗಳನ್ನು ಹಾಗೂ ದೊಡ್ಡ ದೊಡ್ಡ ಪಾತ್ರೆಗಳನ್ನು ಉಪಯೋಗಿಸುತ್ತಿದ್ದರು. ಸಣ್ಣ ಮತ್ತು ಮಧ್ಯಮ ಪ್ರಮಾಣದ ಪಾತ್ರೆಗಳನ್ನು, ಬಟ್ಟಲುಗಳನ್ನು ಚಕ್ರದ ಸಹಾಯದಿಂದ ಮತ್ತು ದೊಡ್ಡ ಗಾತ್ರದ ಗುಡಾಣಗಳನ್ನು ಹಂತ ಹಂತವಾಗಿ ಕೈಯಿಂದ ತಯಾರಿಸಿಕೊಳ್ಳುತ್ತಿದ್ದರು. ಈ ಸಂಸ್ಕೃತಿಯಲ್ಲಿ ಕಂಡು ಬರುವ ಮಡಿಕೆಗಳು, ಕಾಂತಿಮಯ ಕೆಂಪು ಲೇಪನವಿರುವ ತೆಳು ಲೇಪನದ ಮುಸುಕು ಪಾತ್ರೆಗಳು, ಹೊಳಪಾದ ಕೆಂಪು ದ್ವಿವರ್ಣ ಮತ್ತು ಪೂರ್ಣ ಕಪ್ಪು ಬಣ್ಣದ ಮಡಿಕೆಗಳೆಂದು[೬] ವಿಂಗಡಿಸಲಾಗಿದೆ.

ತುಂಗಾಭದ್ರ ಮೇಲ್ದಂಡೆ ಪ್ರದೇಶದಲ್ಲಿ ದೊರೆತಿರುವ ಕಪ್ಪು ಹಾಗೂ ಕಪ್ಪು – ಕೆಂಪು ಪಾತ್ರೆಗಳಲ್ಲಿ ಬಿಳಿ ಬಣ್ಣದ ರೇಖಾ ಚಿತ್ರಗಳಿವೆ. ಈ ಚಿತ್ರಗಳು ಸರಳವಾದವುಗಳಾಗಿವೆ. ಸಣ್ಣ ಮತ್ತು ಮಧ್ಯಮ ಪ್ರಮಾಣದ ಮಡಿಕೆಗಳ ಮೇಲೆ ಅಪರೂಪವಾಗಿ ಗೀಚಿರುವುದು ಸಾಮಾನ್ಯವಾಗಿ

ಕಂಡುಬರುತ್ತದೆ. ಒಂದೊಂದು ವಿಶೇಷವಾಗಿ ಎರಡು ರೇಖೆಗಳಿಂದ ಕೂಡಿವೆ.[೭] ಹೀಗೆ ನಾನಾ ವಿಧದಲ್ಲಿ ಕಂಡು ಬಂದಿರುವುದು ಗಮನಾರ್ಹವೆನಿಸಿದೆ.

ಕಪ್ಪು – ಕೆಂಪು ದ್ವಿವರ್ಣದ ಪಾತ್ರೆಗಳ ತಯಾರಿಕೆಯನ್ನು ಕುರಿತಾಗಿ ವಿದ್ವಾಂಸರು ವೈಜ್ಞಾನಿಕ ವಿಶ್ಲೇಷಣೆಯನ್ನು ಕಂಡುಕೊಂಡಿದ್ದಾರೆ. ಇದರಲ್ಲಿ ಕುಂಬಾರ ಬಟ್ಟಿಯಲ್ಲಿ ಬಿಸಿಲಿಗೆ ಒಣಗಿಸಿ ಮಣ್ಣಿನ ಮಡಕೆಗಳನ್ನು ತಲೆಕೆಳಗಾಗಿಟ್ಟು ಕೆಳಭಾಗ ಮುಚ್ಚಿ ಸುಟ್ಟಿದ್ದರಿಂದ ಗಾಳಿಗೆ ಒಡ್ಡಿದ ಬುಡದ ಹೊರಭಾಗವು ಕೆಂಪಾಗಿಯೂ ಮುಚ್ಚಿದ ಭಾಗವೂ ಮತ್ತು ಒಳಭಾಗವೂ ಕಪ್ಪಾಗಿದೆ ಎಂಬ ನಿರ್ಧಾರಕ್ಕೆ ಬರಲಾಗಿದೆ. ಅಥವಾ ಮಡಕೆಯನ್ನು ಒಂದು ಸಲ ಬಟ್ಟಿಯಲ್ಲಿ ಸುಟ್ಟನಂತರ ಅದಕ್ಕೆ ಬೇಕಾದ ಭಾಗಕೆಲ್ಲ ಕಪ್ಪು ಬಣ್ಣವನ್ನು ಹಚ್ಚಿ ಪುನಃ ಮತ್ತೊಂದು ಸಲ ಬಟ್ಟಿಯಲ್ಲಿ ಸುಟ್ಟಿದ್ದರಿಂದ ಮಡಿಕೆಗಳಲ್ಲಿ ಎರಡೂ ರೀತಿಯ ಬಣ್ಣ ಮೂಡಿರುತ್ತದೆ ಎಂಬ ಮತ್ತೊಂದು ನಿರ್ಧಾರಕ್ಕೆ ಬರಲಾಗಿದೆ. ಈ ರೀತಿಯಾಗಿ ಬೃಹತ್ ಶಿಲಾಯುಗದ ಜನರು ವಿಶೇಷ ಮತ್ತು ವಿಶಿಷ್ಟ ರೀತಿಯ ತಂತ್ರಗಾರಿಕೆ ಅನುಸರಿಸಿ ಮಡಿಕೆಗಳನ್ನು ಸಿದ್ಧಪಡಿಸಿ ಕೊಳ್ಳುತ್ತಿದ್ದರು. ಇಂತಹ ದ್ವಿವರ್ಣದ ಮಡಿಕೆಗಳು ಹರಪ್ಪನಾಗರೀಕತೆ ಹಂತದಿಂದಲೂ ತಯಾರಿಸಲಾಗುತ್ತಿತ್ತು[೮] ಎಂಬುದನ್ನು ಸ್ಮರಿಸಬಹುದಾಗಿದೆ.

ಬೃಹತ್ ಶಿಲಾಯುಗ ಸಂಸ್ಕೃತಿಯ ಜನರ ಮತ್ತೊಂದು ಲಕ್ಷಣಗಳಲ್ಲಿ ಅಲಂಕಾರಿಕ ವಸ್ತುಗಳ ತಯಾರಿಕೆಯು ಸಹ ಪ್ರಮುಖವಾಗಿದೆ. ಹಿಂದಿನ ಸಂಸ್ಕೃತಿಯ ಜನರಂತೆ ಈ ಜನರು ಪೋಣಿಸಿದ ಮಣಿಗಳ ಸರಗಳನ್ನು ತೊಡುತ್ತಿದ್ದರು. ಅವು ಅಗೇಟ್, ಕಾರ್ನೀಲಿಯ, ಜಾಸ್ಪರ್ ಅಪರೂಪವಾಗಿ ಚರ್ನೋರೈಟ್ ಲುಪೀಜ್‌ಲಜೂಲಿ (ನೀಲ) ಮೊದಲಾದ ಉತ್ತಮ ಜಾತಿಯ ಕಲ್ಲಿನ ಮಣಿಗಳಿಂದ ತಯಾರಿಸಿಕೊಳ್ಳುತ್ತಿದ್ದರು.[೯] ಪ್ರಸ್ತುತ ಅಧ್ಯಯನ ಪ್ರದೇಶವಾದ ಕೂಡ್ಲಿಗಿ ತಾಲೂಕಿನ ಗುಡೇಕೋಟೆಯಲ್ಲಿ ಜಾಸ್ಪರ್‌ನಿಂದ ತಯಾರಿಸಿದ ಮಣಿಗಳನ್ನು ವಿದ್ವಾಂಸರು ಶೋಧಿಸಿದ್ದಾರೆ.[೧೦] ಭಾರತದಲ್ಲಿ ಇದುವರೆಗೂ ತಿಳಿದಂತೆ ಎಲ್ಲಿಯೂ ನೀಲಜಾತಿಯ ಮಣಿಗಳು ಕಂಡುಬಂದಿಲ್ಲ. ಶಂಕ ಮತ್ತು ಮಣ್ಣಿನಿಂದ ಅಪರೂಪವಾಗಿ ಚಿನ್ನದಿಂದಲೂ ತಯಾರಿಸಿದ ಮಣಿಗಳ ಸರಗಳನ್ನು ಈ ಕಾಲದ ಜನರು ಧರಿಸುತ್ತಿದ್ದರು. ಉದಾ:– ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿಯ ಒಂದು ಶಿಲಾಸಮಾಧಿಯಲ್ಲಿ ಚಿನ್ನದ ಮಣಿಗಳು ದೊರೆತಿವೆ.[೧೧] ಇವುಗಳು ಸಣ್ಣ ಸಣ್ಣ ಕೊಳವೆಯಾಕಾರದಲ್ಲಿ ಇದ್ದು ಈಗಲೂ ಸಹ ಇಂತಹ ಮಣಿಗಳನ್ನು ಗ್ರಾಮೀಣ ಜನರು ಕೋವಿ ಎಂದು ಕರೆಯುತ್ತಾರೆ. ಮಣ್ಣಿನ ಸರಗಳನ್ನು ತೀರ ಸಾಮಾನ್ಯ ಜನರು ಧರಿಸುತ್ತಿರಬೇಕು. ಮೇಲ್ವರ್ಗದ ಜನತೆ ಮಾತ್ರ ಚಿನ್ನದ ಮಣಿಸರವನ್ನು ಅಲಂಕಾರಿಕ ಆಭರಣಗಳಾಗಿ ಧರಿಸುತ್ತಿದ್ದರೆಂದು ಡಾ. ಸುಂದರ ಅವರು ಅಭಿಪ್ರಾಯ ಪಟ್ಟಿದ್ದಾರೆ.

ಧಾರ್ಮಿಕ ವಿಧಿಗಳಲ್ಲಿ ಭಾಗವಹಿಸುತ್ತಿದ್ದ ಮಹಿಳೆಯರು ಅಲ್ಲಿ ಸೇರಿದ ವ್ಯಕ್ತಿಗಳು ಅಪರೂಪವಾಗಿ ತಮ್ಮ ತಮ್ಮ ನಗ್ನ ದೇಹಗಳನ್ನು ವಿಧ ವಿಧವಾದ ರೇಖಾ ಚಿತ್ರಗಳಿಂದ ಕಟ್ಟು ಕಟ್ಟಳೆಗಳಿಗೆ ಅನುಗುಣವಾಗಿ ಅಲಂಕರಿಸಿಕೊಳ್ಳುತ್ತಿದ್ದರು ಎಂಬುದನ್ನು ಹಿರೇಬೆಣಕಲ್ ನೆಲೆಯಲ್ಲಿನ ಒಂದು

ಗವಿಯಲ್ಲಿ ಕಂಡುಬರುವ ರೇಖಾ ಚಿತ್ರಗಳಿಂದ ಗುರುತಿಸಬಹುದು.[೧೨] ಈ ಸಂಸ್ಕೃತಿಯ ಜನರು ಕಲಾಕ್ಷೇತ್ರಕ್ಕೂ ಸಹ ತಮ್ಮದೇ ಆದಂತಹ ಕೊಡುಗೆ ನೀಡಿದ್ದರು ಎಂಬುದನ್ನು ಗವಿವರ್ಣಚಿತ್ರ ಮತ್ತು ಬಂಡೆ ಚಿತ್ರಗಳಿಂದ ತಿಳಿಯಬಹುದು. ಹಿರೇಬೆಣಕಲ್, ಬಿಳೆಬಾವಿ, ಮಲ್ಲಾಪುರ, ಮೊದಲಾದ ನೆಲೆಗಳಲ್ಲಿ ಈ ರೀತಿಯ ಕುರುಹುಗಳು ದೊರೆತಿವೆ. ಇವುಗಳಲ್ಲಿ ಸಾಕಷ್ಟು ಧಾರ್ಮಿಕ ವಿಧಿ ವಿಧಾನಗಳಿಗೆ ಸಂಬಂಧಿಸಿದವುಗಳಾಗಿವೆ. ಚಿಕ್ಕರಾಮಪುರದಲ್ಲಿ (ಗಂಗಾವತಿ ತಾಲ್ಲೂಕು) ಒಂದು ಗವಿಯಲ್ಲಿ ಅತ್ಯಂತ ಅಪರೂಪವಾದ ಬೃಹತ್ ಶಿಲಾಯುಗ ಸಂಸ್ಕೃತಿಯ ಕಲ್ಲು ಗುಂಡು ವೃತ್ತದ ಶವಸಂಸ್ಕಾರದ ಚಿತ್ರವಿರುವುದನ್ನು ಪುರಾತತ್ವಜ್ಞರು ಶೋಧಿಸಿದ್ದಾರೆ.[೧೩] ಮಲ್ಲಾಪುರದ ಗವಿ ವರ್ಣಚಿತ್ರದಲ್ಲಿ ಎರಡು ಕಾಲುಗಳನ್ನು ಅಗಲಿಸಿ ಸ್ವಲ್ಪ ಕುಗ್ಗಿದ ನಿಂತ ಭಂಗಿಯಲ್ಲಿರುವ ಒಂದು ನಗ್ನ ಗಂಡಸಿನ ೨. ಮೀ ಎತ್ತರ ಚಿತ್ರವಿದ್ದು ಮುಖ ಮೈಯಲ್ಲಿ ರೇಖಾ ಚಿತ್ರದಿಂದ ತುಂಬಿ ಹೋಗಿದೆ. ರಟ್ಟೆಗಳನ್ನು ಅಡ್ಡಲಾಗಿ ಹಿಡಿದು ಕೈಗಳು ಮೇಲಕ್ಕೆತ್ತಿವೆ. ಆದ್ದರಿಂದ ಈ ವ್ಯಕ್ತಿಯು ಸಂತಾನ ಅಭಿವೃದ್ಧಿಗೋಸ್ಕರ ಧಾರ್ಮಿಕ ವಿಧಿಯ ನೃತ್ಯದಲ್ಲಿ ಭಾಗವಹಿಸಿದಂತೆ ತೋರುತ್ತದೆ.[೧೪] ಹಂಪೆ ವರ್ಣಚಿತ್ರದಲ್ಲಿ ಒಬ್ಬ ಸ್ತ್ರೀಯು ಸೇರಿದಂತೆ ನಾಲ್ಕಾರು ಜನರು ನೃತ್ಯದಲ್ಲಿ ತೊಡಗಿರುವಂತೆ ಕಂಡುಬಂದಿದೆ. ಇವಲ್ಲದೆ ನೆರಳಿನಾಕೃತಿಯ ಹಲವಾರು ಚಿತ್ರಗಳಿವೆ. ಕುದುರೆ ಸವಾರರು, ವಿವಿಧ ಆಯುಧಗಳನ್ನು ಧರಿಸಿದ ಬೇಟೆಗಾರರು, ಯೋಧರ ಚಿತ್ರಗಳು ಇಂತಹ ಗವಿಗಳಲ್ಲಿವೆ. ಹಿರೇಬೆಣಕಲ್‌ನಲ್ಲಿನ ಒಂದು ಗವಿಯಲ್ಲಿ ಒಬ್ಬ ವ್ಯಕ್ತಿಯು ಬಾಗಿದ ಕೋಡುಗಳಂತೆ ಶಿರಸ್ತ್ರಾಣ ಮತ್ತು ಬಾಲವನ್ನು ಧರಿಸಿ ನೃತ್ಯಮಾಡುವ ಒಂದು ಚಿತ್ರವು ಅಪರೂಪದ ಚಿತ್ರಗಳಾಗಿವೆ.[೧೫]

ಪ್ರಸ್ತುತ ಅಧ್ಯಯನ ಕ್ಷೇತ್ರವಾದ ಕೂಡ್ಲಿಗಿ ತಾಲೂಕಿನ ಗುಡೇಕೋಟೆಯ ಸನ್ಯಾಸಪ್ಪ ಕೆರೆಯ ದಂಡೆಯ ಬಂಡೆಯ ಮೇಲೆ ನಗ್ನ ಮಾನವಾಕೃತಿಯ ಚಿತ್ರವಿದೆ. ಹಾಗೂ ಬೆಟ್ಟದಲ್ಲಿರುವ ದೊಡ್ಡ ದೊಡ್ಡ ಬಂಡೆಗಳ ಮೇಲೆ ಮಾನವಾಕೃತಿಯ ಚಿತ್ರಗಳನ್ನು ರಚಿಸಿರುವುದು ಕಂಡುಬರುತ್ತದೆ. ಮತ್ತು ಮಾಲಹಳ್ಳಿಯ ದವಳಪ್ಪನ ಗುಂಡಿನ ಮಧ್ಯದಲ್ಲಿ ಜಿಂಕೆ ಹಾಗೂ ಹಾವಿನ ಕುಟ್ಟು ಚಿತ್ರಗಳನ್ನು ಗುರುತಿಸಲಾಗಿದೆ. ಹೀಗೆ ವಿವಿಧ ತಂತ್ರಗಳಿಂದ ವಿವಿಧ ಪ್ರಕಾರಗಳಲ್ಲಿ ಸಾಂಕೇತವಾಗಿಯೂ, ನೈಜವಾಗಿಯೂ ಚಿತ್ರಗಳನ್ನು ಬಿಡಿಸುವ ಈ ಜನರ ಕುಶಲತೆ ಮೊದಲಾದವು ಈ ಸಂಸ್ಕೃತಿಯ ಪ್ರಮುಖ ಲಕ್ಷಣವಾಗಿವೆ.

ಬೃಹತ್ ಶಿಲಾಯುಗದ ಜನರು ಧಾರ್ಮಿಕ ವೈಶಿಷ್ಟತೆಯನ್ನು ಹೊಂದಿದವರಾಗಿದ್ದರು ಎಂಬುದನ್ನು ಅವರು ರಚಿಸಿ ಬಿಟ್ಟು ಹೋಗಿರುವ ಬೃಹದಾಕಾರದ ಕಲ್ಲಿನ ಗೊಂಬೆಗಳು ಸೂಚಿಸುತ್ತವೆ. ಚಪ್ಪಟೆಕಲ್ಲಿನ ನೆರಳಿನಲ್ಲಿ ಮಾನವಾಕೃತಿಯನ್ನು ಹೋಲುವ ಗೊಂಬೆಯನ್ನು ರಚಿಸಲಾಗಿದ್ದು ಮತ್ತೆ ಯಾವುದೇ ರೀತಿಯ ಲಕ್ಷಣಗಳಿರುವುದಿಲ್ಲ. ಹಾಗೂ ಮೈಯನ್ನು ಕೆತ್ತಿರುವುದಿಲ್ಲ. ಇದು ಮೂರ್ತಿಶಿಲ್ಪದ ಆರಂಭಿಕ ಹಂತವಾಗಿ ಗೋಚರಿಸುತ್ತದೆ.[೧೬] ಇಂತಹ ಗೊಂಬೆಗಳು ಕರ್ನಾಟಕ, ತಮಿಳುನಾಡು, ಆಂಧ್ರ ಪ್ರದೇಶ ರಾಜ್ಯಗಳಲ್ಲಿ ಕಂಡು ಬಂದಿವೆ. ಕರ್ನಾಟಕದಲ್ಲಿ ಹಿರೇಬೆಣಕಲ್, ಐಹೊಳೆ, ಕೂಡ್ಲಿಗಿ ತಾಲೂಕಿನ ಕುಮತಿ ಮತ್ತು ಹುಲಿಕುಂಟೆ ನೆಲೆಗಳಲ್ಲಿ ಈ ರೀತಿಯ ಮಾನವಾಕೃತಿಯ ಶಿಲೆಗಳು

(ಗೊಂಬೆಗಳು) ದೊರಕಿವೆ. ಇವುಗಳಲ್ಲಿ ಐಹೊಳೆಯ ಗೊಂಬೆಯು ತೀರ ಸಾಂಕೇತಿಕವಾಗಿ ಅರ್ಧಗೋಲಾಕೃತಿಯಲ್ಲಿ ತಲೆ, ಕಿರಿದಾದ ಕಂಠ, ಮುಂಚಾಚಿದ ಮೊಂಡು ಭುಜಗಳು ಮತ್ತು ನೀಳವಾದ ಮುಂಡ, ಬುಡವೂ ಚೂಪಾಗಿದೆ ಹಾಗೂ ಹಿರೇಬೆಣಕಲ್‌ನ ಬೊಂಬೆ ತಲೆದೊಡ್ಡದಾಗಿದ್ದು, ಮೂರನೇ ಎರಡು ಭಾಗವು ಭೂಮಿಯಲ್ಲಿ ಹುಗಿದಿದೆ. ಒಬ್ಬ ಮನುಷ್ಯನು ರಟ್ಟೆಗಳನ್ನು ಅಡ್ಡ ಚಾಚಿ ಕೈಗಳನ್ನು ಮೇಲೆತ್ತಿ ನಿಂತಂತಿದೆ. ಇದು ಒಂದು ಶಿಲಾಸಮಾಧಿ ಬಳಿಯಿದೆ. ಹುಲಿಕುಂಟೆ ಮತ್ತು ಕುಮತಿ ಮಾನವಾಕೃತಿಯ ಶಿಲೆಗಳ ಬಗ್ಗೆ ಮುಂದಿನ ಪುಟದಲ್ಲಿ ವಿವರಿಸಲಾಗುವುದು, ಹಾಗು ತಮಿಳುನಾಡಿನ ಮೆಟ್ಟೂರಿನಲ್ಲಿ ಕಲ್ಲುಗೊಂಬೆಯು ವೃತ್ತಗೋರಿಯ ಒಂದು ಭಾಗವಾಗಿದ್ದಿತು ಎಂದು ಉತ್ಖನನದಿಂದ ತಿಳಿದುಬರುತ್ತದೆ.[೧೭]

ಆಂಧ್ರಪ್ರದೇಶದ ಒಂದು ಕಲ್ಗೋರಿಯಲ್ಲಿ ತ್ರಿಶೂಲವು ಇದ್ದಿತು. ಜೀವರ್ಗಿ, ಅಂಡೋಲ, ಚಿಕ್ಕನಹಳ್ಳಿ, ಮೊದಲಾದವುಗಳಲ್ಲಿ ಧಾರ್ಮಿಕ ಆಚರಣಾ ಸಾಮಾಗ್ರಿಗಳು ದೊರೆತ್ತಿರುವುದು ತಿಳಿದುಬರುತ್ತದೆ. ಮತ್ತು ಇವುಗಳನ್ನು ಪ್ರಾದೇಶಿಕವಾಗಿ ಪಾಂಡವರಕಲ್ಲು, ರಾಕ್ಷಸಗಲ್ಲು, ರಕ್ಕಸಗಲ್ಲು, ಬುಡಕಟ್ಟು ಜನರು, ಡೆಮನ್ಸ್ (Demns), ಪಿಗ್ಮೀಸ್ (Pygmies)[೧೮] ಎಂದು ಸ್ಥಳೀಯವಾಗಿ ವಿವಿಧ ಹೆಸರುಗಳಿಂದ ಕರೆಯಲಾಗುತ್ತದೆ. ಹೀಗೆ ಬೃಹತ್ ಶಿಲಾಯುಗದ ಧಾರ್ಮಿಕ ವೈವಿದ್ಯತೆಯನ್ನು ಗುರುತಿಸಬಹುದು.

ಬೃಹತ್ ಶಿಲಾಯುಗದ ಜನರ ಜೀವನ ಶೈಲಿಯನ್ನು ತಿಳಿಯಲು ಶವಸಂಸ್ಕಾರ ಪದ್ಧತಿಯು ಪ್ರಮುಖ ಆಕರವಾಗಿ ಕಂಡುಬರುತ್ತದೆ. ಈ ಕಾಲದ ಮಾನವ ಸತ್ತ ಮೇಲೆ ಆ ವ್ಯಕ್ತಿಯ ಶವವನ್ನು ದೊಡ್ಡ ದೊಡ್ಡ ಚಪ್ಪಡಿಕಲ್ಲುಗಳನ್ನು ಬಳಸಿ ಕಲ್ಗೋರಿಗಳನ್ನು ನಿರ್ಮಿಸಿ ಅದರಲ್ಲಿ ಇಟ್ಟು ಊಳುವುದನ್ನು ರೂಢಿಸಿಕೊಂಡು ಬಂದಿದ್ದಾನೆ. ಇಂತಹ ನೂರಾರು ಶಿಲಾ ಸಮಾಧಿಗಳು ವಿವಿಧ ಪ್ರದೇಶಗಳಲ್ಲಿ ವಿವಿಧ ಪ್ರಕಾರಗಳಲ್ಲಿ ಕಂಡುಬಂದಿದ್ದು ಅವುಗಳು ಈ ಕೆಳಗಿನಂತಿವೆ.

ದಕ್ಷಿಣ ಭಾರತದಲ್ಲಿ ಕಂಡು ಬರುವ ಬೃಹತ್ ಶಿಲಾ ಸಮಾಧಿಗಳ ಮಾಧರಿಗಳು ಅಥವಾ ವಿಧಗಳನ್ನು ಈ ಕೆಳಕಂಡಂತೆ ವರ್ಗೀಕರಿಸಲಾಗಿದೆ.

I. ಗುಹಾಂತರ ಸಮಾಧಿಗಳು[೧೯] (Rock cut caves)

೧. ಕಂಬವಿರುವ ಗುಹಾಂತರ ಸಮಾಧಿಗಳು (With pillar)

೨. ಕಂಬವಿಲ್ಲದ ಗುಹಾಂತರ ಸಮಾಧಿಗಳು (Without pillar)

೩. ಮುಚ್ಚಳವಿರುವ ಸಮಾಧಿಗಳು

೪. ಕೋಣೆಯ ಮಾಧರಿಗಳು

II. ಹುಡ್‌ಸ್ಟೋನ್ ಮತ್ತು ಟೋಪಿಕಲ್ಲು (Topikallu)[೨೦] ಸಮಾಧಿಗಳು ಇವುಗಳಲ್ಲಿ ೨ ವಿಧಗಳಿವೆ.

೧. ಕುಳಿಸಮಾಧಿ (Pit barial) ಮೇಲೆ ಹುಡ್‌ಸ್ಟೋನ್ ಮತ್ತು ಟೋಪಿಕಲ್ಲು ಇದ್ದು ನೆಲದ ಅಡಿಯಲ್ಲಿ ಶವಸಂಸ್ಕಾರ ಮಾಡಿರುವುದು ವೃತ್ತದಲ್ಲಿರುತ್ತದೆ.

೨. ಆಯತಾಕಾರವಿರುವ ಇಲ್ಲವೆ ಉದ್ದ ಆಯತಾಕಾರವಾಗಿರುವ (oblong) ಹುಡ್‌ಸ್ಟೋನ್ ಮತ್ತು ಟೋಪಿಕಲ್ಲು ಸಮಾಧಿ.

III. ನಿಲುಸುಗಲ್ಲು (Menhirs)[೨೧] ಇವುಗಳಲ್ಲಿ ಮೂರು ವಿಧಗಳಿವೆ.

೧. ನಿಲುಸುಗಲ್ಲು

೨. ಅಲೈನ್‌ಮೆಂಟ್ (Alignment) ಸಾಲಾಗಿ ನಿಲ್ಲಿಸಿದ ನಿಲುಸುಗಲ್ಲುಗಳು (ಗುಲ್ಬರ್ಗ ಜಿಲ್ಲೆಯ ಶೋರಪುರ ತಾಲೂಕಿನಲ್ಲಿ ಕಂಡುಬಂದಿವೆ).

೩. ಅವೆನ್ಯು (Avenes) ಎರಡೂ ಬದಿಗೆ ನಿಲ್ಲಿಸಿದ ಕಲ್ಲುಗಳು ಇವು ದಖನ್ ಪ್ರದೇಶಗಳಲ್ಲಿ ದೊರೆತಿವೆ.

IV. ಡಾಲ್ಮೆನೆಡ್ ಸಿಸ್ಟ್ (Dolmenoid cist)[೨೨]

ದೊಡ್ಡ ದೊಡ್ಡ ಕಲ್ಲುಗಳನ್ನು ವೃತ್ತಾಕಾರದಲ್ಲಿಟ್ಟು ಅವುಗಳ ಮಧ್ಯ ಚಿಕ್ಕ ಚಿಕ್ಕ ಕಲ್ಲುಗಳನ್ನು ನೆಟ್ಟು ವೃತ್ತಾಕಾರದ ಕೇಂದ್ರದ ಮಧ್ಯದಲ್ಲಿ ಮೇಲ್ನೋಟಕ್ಕೆ ಕಾಣುವಂತೆ ಕಲ್ಮನೆಯ ರಚನೆಯಿದ್ದು ಅದರ ಅಡಿಯಲ್ಲಿ ಅಂತರ್ಗತ ಶವಪೆಟ್ಟಿಗೆ ಇರುತ್ತದೆ. ಇದನ್ನು ಡಾಲ್ಮೆನೆಡ್ ಸಿಸ್ಟ್ ಎಂದು ಕರೆಯಲಾಗುತ್ತದೆ. ಇದರಲ್ಲಿ ಎರಡು ವಿಧಗಳಿವೆ.

೧. ಡಾಲ್‌ಮೆನ್ ಸಿಸ್ಟ್ (Dolmenoid cist)

ಒರಟುಕಲ್ಲುಗಳನ್ನು ವೃತ್ತಾಕಾರದಲ್ಲಿಟ್ಟು ಅದರ ಮಧ್ಯದಲ್ಲಿ ಅಂತರ್ಗತ ಶವ ಪೆಟ್ಟಿಗೆಯನ್ನು ನಿರ್ಮಿಸಲಾಗಿರುತ್ತದೆ.

೨. ಮುಚ್ಚಳ ಕಲ್ಲಿರುವ ಸಿಸ್ಟ್ ಮಾದರಿಗಳು (Cist with cap stones)

ಮುಚ್ಚಳ ಕಲ್ಲಿರುವ ಸಿಸ್ಟ್ ಸಮಾಧಿಗಳನ್ನು ಮತ್ತೆ ಎರಡು ವಿಧಗಳಾಗಿ ವಿಂಗಡಿಸಲಾಗಿದೆ.

ಅ. ಕಂಡಿಕೋಣೆ ಅಥವಾ ಹಾದಿಕೋಣೆ (Passage Tombs)

ಆ. ಕಂಡಿಕೋಣೆ ಇಲ್ಲದ ಅಥವಾ ಹಾದಿ ಇಲ್ಲದ ಅಂತರ್ಗತ ಶವಪೆಟ್ಟಿಗೆಗಳು[೨೩] (Without Passage)

V. ಕೈರನ್ ವೃತ್ತಗಳು (Cairn circle)[೨೪]

ದೊಡ್ಡ ದೊಡ್ಡ ಕಲ್ಲುಗಳನ್ನು ವೃತ್ತಕಾರದಲ್ಲಿಟ್ಟು ಅದರ ಮಧ್ಯ ಚಿಕ್ಕ ಕಲ್ಲುಗಳನ್ನು ನೆಟ್ಟಿರುತ್ತಾರೆ. ಇದನ್ನು ಅಗೆದರೆ ಅಂತರ್ಗತ ಶವಪೆಟ್ಟಿಗೆ ಸಿಗಬಹುದು. ಇಲ್ಲವೆ 'ಶವಕುಳಿ (Pit circle), ಸ್ಯಾರ್ಕೋಫೋಗಾಸ್, ಅರ್ನ್‌ಬರಿಯಲ್' ಲಭಿಸಬಹುದು.[೨೫] ಇವುಗಳೆಲ್ಲಾ ಆಧರಿಸಿ ಕೈರನ್ ವೃತ್ತಗಳನ್ನು ೩ ವಿಧಗಳಾಗಿ ವರ್ಗೀಕರಿಸಲಾಗಿದೆ.

೧. ಶವಕುಳಿ ಸಮಾಧಿ (Pit circle)

೨. ಸ್ಯಾರ್ಕೋಫೋಗಾಸ್ (Sarcophages)

೩. ಅರ್ನ್‌ಬರಿಯಲ್ (Urn burial)

VI. ಶವಕುಳಿ ಸಮಾಧಿಗಳು (Pit circles)

ಭೂಮಿಯ ಮೇಲೆ ನೋಡಲು ಏನು ಕಾಣುವುದಿಲ್ಲ. ನೆಲದಲ್ಲಿ ಅರ್ನಬರಿಯಲ್ ಇರುತ್ತದೆ. ಆದರೆ ಅದನ್ನು ಅಗೆದಾಗ ಮಾತ್ರ ಈ ರೀತಿಯ ಸಮಾಧಿಯು ಕಂಡುಬರುತ್ತದೆ.

VII. ಬ್ಯಾರೋಸ್ (Barrows)[೨೬]

ವೃತ್ತಾಕಾರ, ಉದ್ದ, ಆಯತಾಕಾರ, ಚೌಕಾಕಾರದಲ್ಲಿ ಮಣ್ಣಿನ ದಿಬ್ಬವಿರುತ್ತದೆ. ಈ ದಿಬ್ಬದ ಅಡಿಯಲ್ಲಿ ಶವಸಂಸ್ಕಾರ ಮಾಡಿರುತ್ತಾರೆ.

ಕರ್ನಾಟಕದಲ್ಲಿ ಬೃಹತ್‌ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದ ಏಳು ರೀತಿಯ ಸಮಾಧಿಗಳು ಕಂಡು ಬಂದಿವೆ.[೨೭] ಅವುಗಳೆಂದರೆ,

೧. ಹಾದಿಕೋಣೆ ಗೋರಿಗಳು ೨. ಕಿಂಡಿಕೋಣೆ ಗೋರಿಗಳು

೩. ಕಲ್ಲು ವೃತ್ತಗಳು ೪. ಚಕ್ಕೆ ಕಲ್ಲುಗಳಿಂದ ತುಂಬಿದ ಕಲ್ಲುವೃತ್ತಗಳು

೫. ವರ್ತುಲ ಗಡ್ಡೆಗಳು೬. ಶವಕುಣಿಗಳು

೭. ನಿಲುಸುಗಲ್ಲುಗಳು

**೧.ಹಾದಿಕೋಣೆ ಗೋರಿಗಳು**

ಹಾದಿಕೋಣೆಗೋರಿಗಳ ರಚನೆಯು ತುಂಬಾ ಸರಳವೆಂಬಂತೆ ಕಂಡುಬಂದರೂ ಕೌಶಲ್ಯತೆಯಿಂದ ಕೂಡಿರುತ್ತದೆ. ಹಾದಿಕೋಣೆಗಳು ಚೌಕಾಕಾರವಾಗಿದ್ದು ಒಂದು ಮೇಜಿನ ರೂಪದಲ್ಲಿ ಕಾಣುತ್ತವೆ. ಇವು ನೆಲದ ಮೇಲೆ ಹಾಗೂ ಭೂಮಿಯಲ್ಲಿ ಅಂತರ್ಗತವಾಗಿರುತ್ತವೆ. ನಾಲ್ಕು ಬದಿಗಳಲ್ಲಿ ದೊಡ್ಡ ಚಪ್ಪಡಿಗಳನ್ನು ಲಂಭವಾಗಿ ನಿಲ್ಲಿಸಿ ಮೇಲೆ ದೊಡ್ಡದಾದ ಚಪ್ಪಡಿಕಲ್ಲುನ್ನು ಛತ್ರಿಕಲ್ಲಾಗಿ ಇಟ್ಟಿರುತ್ತಾರೆ.

ಸಾಧಾರಣವಾಗಿ ೧ ೧/೨ ಮೀ.ಉದ್ದ ಮತ್ತು ೨ ೧/೨ ಮೀ. ಅಗಲ ಹಾಗೂ ೧ ೧/೨ ಮೀ. ಎತ್ತವಿರುತ್ತದೆ. ಈ ಸಮಾಧಿಗಳಿಗೆ ದಕ್ಷಿಣದ ಬದಿಯಲ್ಲಿ ಎರಡು ಕಲ್ಲುಗಳನ್ನು ಮಧ್ಯದಲ್ಲಿ ಅಂತರ್‌ವಿಟ್ಟು ಲಂಭವಾಗಿ ನಿಲ್ಲಿಸಿದ ಎರಡು ಬದಿಯಲ್ಲಿ ನೆಟ್ಟಿರುತ್ತಾರೆ.[೨೮] ದಕ್ಷಿಣಭಿಮುಖವಾಗಿ ಹಾದಿಯಿರುತ್ತದೆ. ಈ ಹಾದಿಕೋಣೆ ಸಮಾಧಿಗಳಲ್ಲಿ ಎರಡು ಉಪ ಮಾಧರಿಗಳಿವೆ.

೧. ಕೊಣ್ಣೂರು ಮಾದರಿ ೨. ಕಲಾದಗಿ ಮಾದರಿ

## ೨. ಕಂಡಿಕೋಣೆ ಗೋರಿಗಳು

ಕಂಡಿಕೋಣೆ ಸಮಾಧಿಗಳು ಚತುರಪ್ರಕಾರದ ಪೆಟ್ಟಿಗೆ ಹಾಗೂ ಒಂದು ಮೇಜಿನ ಆಕಾರದಲ್ಲಿರುತ್ತದೆ. ಇವುಗಳು ಹಾದಿಕೋಣೆ ಸಮಾಧಿಗಳನ್ನು ಹೋಲುತ್ತಿದ್ದು. ಹೆಚ್ಚು ಕಡಿಮೆ ಅಷ್ಟೇ ಸುತ್ತಳತೆ ಹಾಗೂ ಉದ್ದಗಲಗಳಿರುತ್ತವೆ. ನಾಲ್ಕು ಬದಿಗೂ ಒಂದಕ್ಕೊಂದು ಅನಿಸಿ ಲಂಭವಾಗಿ ಕಲ್ಲು ಚಪ್ಪಡಿಗಳನ್ನು (ಮುಚ್ಚಳ ಕಲ್ಲು) ಇಟ್ಟಿರುತ್ತಾರೆ. ವಿಶೇಷವಾಗಿ ಪೂರ್ವದಿಕ್ಕಿಗೆ ಲಂಭವಾಗಿ ನಿಲ್ಲಿಸಿದ ಚಪ್ಪಡಿಕಲ್ಲಿಗೆ ಕಂಡಿಯನ್ನು ನಿರ್ಮಿಸಲಾಗಿರುತ್ತದೆ. ಈ ರೀತಿಯ ಕಂಡಿಕೋಣೆ ಸಮಾಧಿಗಳು ತಮಿಳುನಾಡು, ಆಂದ್ರಪ್ರದೇಶ ಕರ್ನಾಟಕದಲ್ಲೂ ಕಂಡುಬಂದಿವೆ. ಒಟ್ಟಿನಲ್ಲಿ ಕಂಡುಬರುವ ಕಂಡಿಕೋಣೆ ಸಮಾಧಿಗಳ ನಾಲ್ಕು ಉಪಮಾದರಿಗಳಾಗಿ ವಿಂಗಡಿಸಲಾಗಿದೆ.[೨೯] ಐಹೊಳೆ ೨) ರಾಜನ ಕೋಳೂರು ೩) ಹಿರೇಬೆಣಕಲ್ ೪) ಬ್ರಹ್ಮಗಿರಿ, ಕುಮತಿ, ಹಳೆಕರೆ, ಹಾಗೂ ಮೊಳಕಾಲ್ಮೂರಿನ ನುಂಕೆಮಲೆಗಳಲ್ಲಿ ಕಂಡುಬರುವ ಕಿಂಡಿಕೋಣೆ ಸಮಾಧಿಗಳಲ್ಲಿ ಕಿಂಡಿಕೋಣೆಗಳು ಪೂರ್ವದಿಕ್ಕಿಗೆ ಇದ್ದರೂ ಆ ಸಮಾಧಿಗಳು ಭೂಮಿಯಲ್ಲಿ ಅಂತರ್ಗತವಾಗಿರದೆ ಭೂಮಿಯ ಮೇಲಿವೆ.

## ೩. ಕಲ್ಲು ವೃತ್ತಗಳು

ಈ ಮಾದರಿಯ ಸಮಾಧಿಗಳು ಆಂದ್ರಪ್ರದೇಶದ ಅನಂತಪುರ ಜಿಲ್ಲೆ ದಕ್ಷಿಣ ಕರ್ನಾಟಕದ ಕೋಲಾರ, ಮೈಸೂರು, ಮಂಡ್ಯ, ಹಾಸನ, ಚಿಕ್ಕ ಮಂಗಳೂರು, ಶಿವಮೊಗ್ಗ, ಚಿತ್ರದುರ್ಗ ಜಿಲ್ಲೆಗಳಲ್ಲದೆ ಉತ್ತರ ಕರ್ನಾಟಕದ ಕೆಲವು ನೆಲೆಗಳಲ್ಲಿ ದೊರೆತಿವೆ.

## ೪. ಚಕ್ಕೆಕಲ್ಲುಗಳಿಂದ ತುಂಬಿದ ಕಲ್ಲುವೃತ್ತಗಳು

ಕರ್ನಾಟಕದಲ್ಲಿ ಈ ಬಗೆಯ ಸಮಾಧಿಗಳು ಹೆಚ್ಚಾಗಿ ಕಂಡುಬರುತ್ತವೆ. ಈ ಮಾಧರಿಯ ಸಮಾಧಿಗಳ ನಾಲ್ಕು ದಿಕ್ಕಿಗೆ ಚಪ್ಪಡಿ ಕಲ್ಲುಗಳನ್ನು ಒಂದಕ್ಕೊಂದು ಆನಿಸಿ ನೆಟ್ಟಿರಲಾಗಿರುತ್ತದೆ. ಅದರ ಮಧ್ಯ ಶವಸಂಸ್ಕಾರವನ್ನು ಮಾಡಲಾಗಿರುತ್ತಿತ್ತು, ಈ ಸಮಾಧಿಗಳಿಗೆ ಛತ್ತಿಯ ಮೇಲೆ ಚಪ್ಪಡಿಕಲ್ಲು ಇರುವುದಿಲ್ಲ. ಇವುಗಳು ಭೂಮಿಯ ಮೇಲ್ಮಟ್ಟದಲ್ಲಿ ಹೆಚ್ಚಾಗಿದ್ದು ಕೆಲವೊಮ್ಮೆ ನೆಲಗಳಲ್ಲಿ ನಾಲ್ಕು ದಿಕ್ಕಿಗೆ ಒಂದ್ಕೊಂದು ಆನಿಸಿ ಚಪ್ಪಡಿಕಲ್ಲುಗಳನ್ನು ಭೂ ಮಟ್ಟದಿಂದ ಮೇಲಕ್ಕೆ ಎತ್ತರಿಸಲಾಗಿರುತ್ತದೆ. ಮತ್ತು ಆಯತಾಕಾರ ಇಲ್ಲವೆ ಸ್ವಸ್ತಿಕ್ ಆಕಾರದಲ್ಲಿರುತ್ತವೆ.[೩೦]

## ೫. ವರ್ತುಲ ಗಡ್ಡೆಗಳು

ಈ ಮಾದರಿಯ ಸಮಾಧಿಗಳು ಭೂಮಿಯ ಮೇಲೆ ವರ್ತುಲಕಾರದಲ್ಲಿ ಸ್ವಲ್ಪ ಮೇಲೆ ಹೆಚ್ಚಾದಂತೆ ಗೋಚರಿಸುತ್ತವೆ. ಇವುಗಳನ್ನು ಮಣ್ಣು ಮತ್ತು ತುಂಡು ಶಿಲೆಗಳಿಂದ ನಿರ್ಮಿಸಲಾಗಿರುತ್ತವೆ. ಈ ರೀತಿಯ ಸಮಾಧಿಗಳು ಅಧ್ಯಯನ ಕ್ಷೇತ್ರದಲ್ಲಿ ಇದುವರೆಗೂ ಕಂಡುಬಂದಿಲ್ಲ.

## ೬. ಶವಕುಣಿಗಳು

ಶವಸಂಸ್ಕಾರ ಮಾಡುವ ಮೊದಲು ಕುಣಿಯನ್ನು ತೆಗೆದು ನೆಲ ಮತ್ತು ಗೋಡೆಗಳನ್ನು ತಟ್ಟಿ

ಸಮಮಾಡಿ ಮರಳು ಮತ್ತು ಸುಣ್ಣದ ಪದರುಗಳನ್ನು ನಿರ್ಮಿಸಿ ಶವ ಸಂಸ್ಕಾರವನ್ನು ಮಾಡಲಾಗುತ್ತಿತ್ತು. ಇವು ಮೇಲ್ನೋಟಕ್ಕೆ ವೃತ್ತಾಕಾರದಲ್ಲಿದ್ದು, ಶವಕುಣಿಗಳ ಮೇಲ್ಭಾಗದಲ್ಲಿ ವೃತ್ತಾಕಾರವಾಗಿ ದೊಡ್ಡ ದೊಡ್ಡ ದುಂಡು ಶಿಲೆಗಳನ್ನು ನೆಟ್ಟಿರುತ್ತಿದ್ದು ಆ ದುಂಡು ಶಿಲೆ ವೃತ್ತಗಳು ಒಂದು ಅಥವಾ ಅದಕ್ಕಿಂತಲೂ ಹೆಚ್ಚು ಇರಬಹುದು. ಕೆಲವೊಂದು ಸಮಾಧಿಗಳಿಗೆ ನೆಟ್ಟ ದುಂಡುಶಿಲೆಯ ಹೊರ ಬದಿಯಲ್ಲಿ ಚಕ್ಕೆ ಚಪ್ಪಡಿಕಲ್ಲುಗಳನ್ನು ನೆಟ್ಟಿರುತ್ತಾರೆ.[೩೦]

**೭. ನಿಲುಸುಗಲ್ಲುಗಳು**

ಬೃಹತ್ ಶಿಲಾಸಮಾಧಿ ಮಾದರಿಗಳಲ್ಲಿ ನಿಲುಸುಕಲ್ಲುಗಳು ಸಹ ಕಂಡುಬರುತ್ತವೆ. ಬಟ್ಟಲಾಕೃತಿಯಲ್ಲಿ ಶವಸಂಸ್ಕಾರ ಮಾಡಿ ದಫನು ಮಾಡುವಾಗ ಇಡುವ ಸಾಮಗ್ರಿಗಳನ್ನೆಲ್ಲಾ ಅದರೊಳಗಿಟ್ಟು ಅದರ ಮೇಲೆ ಒಂದು ನಿಲುಸುಗಲ್ಲನ್ನು ನೆಡುತ್ತಿದ್ದರೆಂದು ಅ.ಸುಂದರ ಅವರು ಅಭಿಪ್ರಾಯಪಡುತ್ತಾರೆ.[೩೨]

ಹೀಗೆ ನಿಲ್ಲಿಸಿರುವ ನಿಲವುಗಲ್ಲುಗಳು ದೊಡ್ಡ ಪ್ರಮಾಣದಲ್ಲಿರಬಹುದು. ಇಲ್ಲವೇ ಚಿಕ್ಕ ಪ್ರಮಾಣದಲ್ಲಿರಬಹುದು. ಈ ರೀತಿಯ ನಿಲುಸುಗಲ್ಲನ್ನು ನಿಲ್ಲಿಸುವಾಗ ಆ ಕಲ್ಲಿನ ಪ್ರಮಾಣಕ್ಕನುಗುಣವಾಗಿ ಶೇ ೮೦ – ೭೫ ರಷ್ಟು ಕಲ್ಲನ್ನು ನೆಲದ ಮೇಲಿರುವಂತೆ ಹೂಳಲಾಗಿರುತ್ತದೆ. ಕರ್ನಾಟಕದ ಬೇರೆ ಬೇರೆ ಕಡೆಗಳಲ್ಲಿ ಈ ನಿಲಸುಗಲ್ಲುಗಳು ಕಂಡುಬಂದಿವೆ. ಹೀಗೆ ಮೇಲೆ ತಿಳಿಸಿದ ಪ್ರತಿಯೊಂದು ಶಿಲಾಸಮಾಧಿ ಮಾಧರಿಗಳು ಬೇರೆ ಬೇರೆ ಕಾಲಘಟ್ಟಗಳಲ್ಲಿ ಸ್ವತಂತ್ರವಾಗಿ ಹುಟ್ಟಿ ಬೆಳೆಯಲಿಲ್ಲ ಕೆಲವು ಮಾಧರಿಗಳಲ್ಲಿ ಒಂದಕ್ಕೊಂದು ಸಂಬಂಧವಿದ್ದು ಒಂದು ಮಾದರಿಯಿಂದ ಇನ್ನೊಂದು ಮಾಧರಿಯು ಬೆಳೆದಿರುವ ಸಾಧ್ಯತೆಗಳಿವೆ.[೩೩]

ಮಾರ್ಟಿಮರ್ ವೀಲ್ಹರ್, ಕೃಷ್ಣಸ್ವಾಮಿ, ಬಿ.ಕೆ.ಗುರುರಾಜರಾವ್, ಅ.ಸುಂದರ ಮೊದಲಾದವರು ಕರ್ನಾಟಕದಲ್ಲಿ ಕಂಡು ಬರುವ ಬೃಹತ್ ಶಿಲಾ ಸಮಾಧಿಗಳನ್ನು ಗುರುತಿಸಿ ವಿವಿಧ ಪ್ರಕಾರಗಳಾಗಿ ವಿಂಗಡಿಸಿದ್ದಾರೆ. ಈ ಹಿಂದೆ ಮಾಡಿದ ಕೃಷ್ಣಸ್ವಾಮಿಯವರ ವರ್ಗೀಕರಣವನ್ನು ಮತ್ತೊಮ್ಮೆ ಪರಿಶೀಲಿಸಿದ ಅ.ಸುಂದರ ಮೊದಲಾದವರು ೧೮೭೫ರಲ್ಲಿ ಇಡೀ ಕರ್ನಾಟಕಕ್ಕೆ ಸಂಬಂಧಿಸಿದಂತೆ ಹೊಸದಾಗಿ ಮೂರು ಮಾದರಿಗಳನ್ನು ಸೇರಿಸಿದ್ದಾರೆ.

೧) ಕೋಣೆ ಸಮಾಧಿಗಳು

೨) ಕೋಣೆಗಳಿಲ್ಲದ ಸಮಾಧಿಗಳು

೩) ಬೃಹತ್ ಸಾಲುಗಲ್ಲುಗಳೂ ಎಂಬುದಾಗಿ ಈ ರೀತಿಯಾಗಿ ಬೃಹತ್ ಶಿಲಾಸಮಾಧಿ ಮಾದರಿಗಳು ಕರ್ನಾಟಕದಲ್ಲಿ ಕಂಡುಬಂದಿವೆ.[೩೪]

ಒಟ್ಟಿನಲ್ಲಿ ದಾರಿಕೋಣೆ ಅಥವಾ ಕಂಡಿಕೋಣೆ ಸಮಾಧಿಗಳು ಬಹುಮಟ್ಟಿಗೆ ಹೊರಗಿನಿಂದ ಬಂದ ಜನರ ನಿರ್ಮಿತಿಗಳಾಗಿವೆ. ಆದ್ದರಿಂದ ಈ ಸಂಸ್ಕೃತಿಯನ್ನು ಉತ್ಖನನಕಾರರು ಇಂಟ್ರೂಸಿವ್ (Intrusive) ಸಂಸ್ಕೃತಿ ಎಂದು ಕರೆದಿದ್ದಾರೆ.[೩೫] ಇದರಿಂದಾಗಿ ಮೂಲದಲ್ಲಿ ಇದ್ದಂತಹ

ಸ್ಥಳೀಯ ಶಿಲಾ-ತಾಮ್ರಯುಗದ ಜನರು ತಮ್ಮ ಸಮಾಜದ ಶವಸಂಸ್ಕಾರದಲ್ಲಿ ಕ್ರಮೇಣ ಕಲ್ಲು ಚಕ್ಕೆಗಳಿಂದ ಕೂಡಿದ ಸಮಾಧಿಗಳನ್ನು ಭದ್ರ ಮಾಡುವುದನ್ನು ಆರಂಬಿಸಿದರೆಂದು ತಿಳಿದುಬರುತ್ತದೆ.

ಕಲ್ಲುವೃತ್ತಗಳು, ಆಯತಾಕಾರದ ಪೆಟ್ಟಿಗೆಗಳ ನಿರ್ಮಾಣ ಮಾಡುವ ಕಲೆ ಶಿಲಾ – ತಾಮ್ರಯುಗ ಹಂತದಿಂದ ಆರಂಭವಾಯಿತೆಂದು ನಂಬಲಾಗಿದೆ. ತದನಂತರ ಕಬ್ಬಿಣದ ಬಳಕೆ ಪ್ರಾರಂಭವಾದ್ದರಿಂದ ಕಲ್ಗೋರಿಗಳನ್ನು ನಿರ್ಮಾಣಮಾಡುವ ಕಲೆ ಆರಂಭವಾಯಿತೆಂದು ನಿರ್ಧರಿಸಬಹುದು. ಹೀಗೆ ಕಲ್ಗೋರಿಗಳ ನಿರ್ಮಾಣವನ್ನು ಅತಿ ದೊಡ್ಡ ಪ್ರಮಾಣದಲ್ಲಿ ವಿಶೇಷ ರೀತಿಯಲ್ಲಿ ರಚನೆ ಮಾಡಲಾಯಿತು. ಕೆಲವು ಕಡೆ ಸಾಮಾನ್ಯವಾಗಿ ಕಂಡುಬರುವ ಗೋರಿಗಳು ಮಧ್ಯಮ ವರ್ಗದವುಗಳಾಗಿದ್ದು ತೇರದಾಳ, ಹಳಿಂಗಳಿಯಲ್ಲಿಯ ಕೆಲವು ಆ ಜನರ ನಾಯಕರ ಬೃಹತ್ ಶಿಲಾಸಮಾಧಿಗಳಾಗಿ ಕಂಡುಬಂದಿವೆ.[೩೬] ಸಾವಣದುರ್ಗದ ಏಕಕೇಂದ್ರದ ಏಳುವೃತ್ತದ ಕಂಡಿಕೋಣೆಗೋರಿಯು ಅಲ್ಲಿಯ ಒಬ್ಬ ಜನನಾಯಕನದೆಂದು ಹೇಳಬಹುದು. ಇನ್ನೂ ಕೆಲವು ನೆಲೆಗಳ ಒಂದು ಭಾಗದಲ್ಲಿ ಒಂದು ಪ್ರಕಾರದ ಗೋರಿಗಳ ಮತ್ತೊಂದು ಭಾಗದಲ್ಲಿ ವಿಭಿನ್ನ ಪ್ರಕಾರದ ಕಲ್ಗೋರಿಗಳಾಗಿ ಕಂಡುಬಂದಿವೆ.[೩೭]

ಈ ಕಲ್ಗೋರಿಗಳ ಬೃಹತ್ ಶಿಲಾಯುಗ ಸಂಸ್ಕೃತಿಯ ಸಾಮಾಜಿಕ ವ್ಯವಸ್ಥೆಯ ಬಗ್ಗೆ ಬೆಳಕು ಚೆಲ್ಲುತ್ತವೆ. ಪಶುಸಂಗೋಪನೆ ವೃತ್ತಿಯುಳ್ಳ ಜನಸಮುದಾಯದಲ್ಲಿ ವಲಸೆ ಹೋಗುವ ಅಲೆಮಾರಿಗಳು, ಕೃಷಿಮಾಡುವ ಜನರು, ಕಲ್ಲಿನಿಂದ ವಿವಿಧ ಜಾತಿಯ ಮಣಿಗಳನ್ನು ತಯಾರುಮಾಡುವವರು, ಚಾಪೆ ಎಣೆಯುವವರು, ಮಡಿಕೆ-ಪಾತ್ರೆಗಳನ್ನು ತಯಾರಿಸುವವರು, ಕಮ್ಮಾರಿಕೆ ಕೆಲಸಮಾಡುವವರು ಹೀಗೆ ಸಮಾಜ ವೈವಿಧ್ಯತೆಯಿಂದ ಕೂಡಿತ್ತು. ಇವರಲ್ಲಿ ಕೆಲವರು ಕುದುರೆ ಸವಾರರು ಸೇರಿದಂತೆ ಯೋಧರ ವರ್ಗಕ್ಕೆ ಸೇರಿದವರೆಂದು ಗೋಚರಿಸುತ್ತದೆ.[೩೮] ವಿವಿಧ ಪ್ರಕಾರಗಳಲ್ಲಿ ಕತ್ತಿ, ಭಲ್ಲೆ, ಈಟಿ, ಬಾಣಗಳು ಕಠಾರಿ, ಚಪ್ಪಟೆ ಕೊಡಲಿ ಮೊದಲಾದವು ಹೆಚ್ಚಾಗಿ ಬೇಟೆಯಾಡುವುದಕಲ್ಲದೆ ಶತ್ರುಗಳ ದಮನಕ್ಕೆ ಉಪಯೋಗವಾಗುವಂಥವು ಮತ್ತು ಸಮಾಜದಲ್ಲಿ ಪರಸ್ಪರ ಸಂಬಂಧ ಅನೂನ್ಯತೆಯಿಂದ ಕೂಡಿತ್ತು ಎಂಬುದನ್ನು ವಿವಿಧ ಪ್ರಕಾರಗಳ ನಿರ್ಮಿತಿಗಳಲ್ಲಿ ಕಂಡುಬರುತ್ತದೆ. ಈ ಜನರು ಬೃಹತ್ ಶಿಲಾಸಮಾಧಿ ನಿರ್ಮಾಣ ಕಾರ್ಯದಲ್ಲಿ ಸಾಕಷ್ಟು ಜನರು ಸೇರಿ ಪೂರ್ಣಗೊಳಿಸುತ್ತಿದ್ದರು ಎಂಬುದನ್ನು ತಿಳಿಯಬಹುದು. ಏಕೆಂದರೆ ಕೆಲವೊಂದು ಕಲ್ಗೋರಿಗಳಲ್ಲಿ ದೊಡ್ಡ ಸಂಖ್ಯೆಯಲ್ಲಿ ಮೃತ್ಪಾತ್ರೆಗಳು ಕಂಡುಬಂದಿರುವುದರಿಂದ ಈ ರೀತಿಯ ಅಭಿಪ್ರಾಯಕ್ಕೆ ಬರಲಾಗಿದೆ. ಒಟ್ಟಿನಲ್ಲಿ ಬೃಹತ್ ಶಿಲಾಯುಗದ ಜನರು ಬಲಾಢ್ಯ ಮತ್ತು ವ್ಯವಸ್ಥಿತ ಸುಧಾರಿತ ಸಮಾಜವಾಗಿ ಬೆಳೆದಿತ್ತು ಎಂಬುದನ್ನು ಊಹಿಸಬಹುದು. ಹೀಗೆ ಬೃಹತ್ ಶಿಲಾಯುಗದ ಜನರ ಜೀವನ ಶೈಲಿಯು ವೈವಿಧ್ಯತೆಯಿಂದ ಕೂಡಿತ್ತು ಎಂದು ಹೇಳಬಹುದು.

### ೩.೨ ಬೃಹತ್ ಶಿಲಾಯುಗದ ನೆಲೆಗಳು ಮತ್ತು ಅವುಗಳ ಸ್ವರೂಪ

ಬೃಹತ್ ಶಿಲಾಯುಗದ ನೆಲೆಗಳು ಸಾಮಾನ್ಯವಾಗಿ ಬೆಟ್ಟ-ಗುಡ್ಡಗಳಲ್ಲಿ ದೊಡ್ಡ ಪ್ರಮಾಣದಲ್ಲಿ

ಸುಲಭವಾಗಿ ದೊರಕುವ ಕಲ್ಲುಚಪ್ಪಡಿಗಳ ಗುಂಡುಗಳು ದೊರೆಯಬಹುದಾದ ಪ್ರದೇಶದಲ್ಲಿವೆ. ಇಂತಹ ಬೆಟ್ಟ-ಗುಡ್ಡಗಳ ತಪ್ಪಲಿನಲ್ಲಿ ಬೃಹತ್ ಗೋರಿಗಳು ಕಂಡುಬರುವುದರಿಂದ ಇವುಗಳ ಸಮೀಪದಲ್ಲಿ ಈ ಜನದ ವಾಸ್ತವ್ಯ ಹೂಡಿದ್ದರು ಎಂಬುದನ್ನು ಅರಿಯಬಹುದಾಗಿದೆ. ಹೀಗೆ ಬೆಟ್ಟ-ಗುಡ್ಡಗಳ ಸಮತಟ್ಟಾದ ತಪ್ಪಲುಗಳಲ್ಲು ಹಾಗೂ ಶಿಲಾಮಯ ಬರಡು ಭೂಮಿಗಳನ್ನು ಕಲ್ಗೋರಿಗಳ ನಿರ್ಮಾಣಕ್ಕೆ ಮೀಸಲಿಡುತ್ತಿದ್ದರು. ಕೃಷಿಗೆ ಯೋಗ್ಯವಾದ ಭೂಮಿಯಲ್ಲಿ ಇಂತಹ ನಿರ್ಮಿತಿಗಳು ಕಂಡುಬರುವುದು ವಿರಳವೆನಿಸಿದೆ. ಹೀಗೆ ಬೃಹತ್ ಶಿಲಾಯುಗದ ನೆಲೆಗಳನ್ನು ಸ್ಮಶಾನನೆಲೆಗಳು ಹಾಗೂ ವಸತಿನೆಲೆಗಳೆಂದು ಗುರುತಿಸಲಾಗುತ್ತದೆ. ಹೀಗೆ ಭಾರತದಮಟ್ಟಿಗೆ ಹೇಳುವುದಾದರೆ ಬೃಹತ್ ಶಿಲಾಯುಗದ ಅಧ್ಯಯನವು ೧೮೨೩ರಲ್ಲಿ ಕೇರಳದ ಕರಾವಳಿಪ್ರದೇಶದಲ್ಲಿ ಪ್ರಥಮಬಾರಿಗೆ ಬ್ಯಾಬಿಂಗಟನ್‌ರವರು ಅವಶೇಷಗಳನ್ನು ಸಂಶೋಧಿಸುವುದರ ಮೂಲಕ ಪ್ರಾರಂಬಿಸಿದರು. ಬೃಹತ್ ಶಿಲಾಯುಗದ ನೆಲೆಗಳನ್ನು ಅಧ್ಯಯನ ದೃಷ್ಠಿಯಿಂದ ಎರಡು ವಿಭಾಗಗಳಾಗಿ ವಿಂಗಡಿಸಿಕೊಳ್ಳಲಾಗಿದೆ.

೧) ಉತ್ಖನನ ನೆಲೆಗಳು

೨) ಅನ್ವೇಷಣಾ ನೆಲೆಗಳು

**೧. ಉತ್ಖನನ ನೆಲೆಗಳು**

ಪ್ರಾಚೀನ ನಿವೇಶನಗಳನ್ನು ವ್ಯವಸ್ಥಿತವಾಗಿಯೂ ವೈಜ್ಞಾನಿಕವಾಗಿಯೂ ಅಗೆಯುವ ಕಾರ್ಯಕ್ಕೆ ಉತ್ಖನನ ಎಂದು ಕರೆಯಲಾಗುತ್ತದೆ. ಅನ್ವೇಷಣೆಯ ಸಂದರ್ಭದಲ್ಲಿ ಭೂ ಮೇಲ್ಮೈಯಲ್ಲಿನ ವಸ್ತುಗಳನ್ನು ಗುರುತಿಸಿದರೂ ಅವುಗಳ ಸಂದರ್ಭ ಕಾಲವನ್ನು ತಿಳಿಯುವುದು ಉತ್ಖನನ ಸಹಾಯದಿಂದಲೇ ಎಂದು ಹೇಳಬಹುದು. ಉತ್ಖನನ ಸಮಯದಲ್ಲಿ ಯಾವ ಸ್ತರದಲ್ಲಿ ಯಾವ ಯಾವ ವಸ್ತುಗಳಿವೆ. ಎಂಬುದನ್ನು ನಿರ್ದಿಷ್ಟವಾಗಿ ಗುರುತಿಸಿಕೊಳ್ಳುವುದರ ಮೂಲಕ ದೊರೆತ ಅವಶೇಷಗಳನ್ನು ಸಮಗ್ರವಾಗಿ ಅಧ್ಯಯನ ಮಾಡಲು ಬೇರೆ ಬೇರೆ ಅಧ್ಯಯನ ಶಿಸ್ತುಗಳನ್ನು ಪರಿಗಣಿಸಲಾಗುತ್ತದೆ.

ಈ ನಿಟ್ಟಿನಲ್ಲಿ ಭಾರತದ ಹಲವು ಪ್ರಾಚೀನ ನೆಲೆಗಳನ್ನು ದೇಶೀಯ ವಿದೇಶಿಯ ಪುರಾತತ್ವಜ್ಞರು ಉತ್ಖನನ ಮೂಲಕ ಪರಿಶೋಧಿಸಿ ಅವುಗಳನ್ನು ಉತ್ಖನನ ನೆಲೆಗಳೆಂದು ಗುರುತಿಸಿಕೊಂಡಿದ್ದಾರೆ. ಅವುಗಳಲ್ಲಿ ಪ್ರಮುಖವಾದ ನೆಲೆಗಳನ್ನು ಮಾತ್ರ ಪ್ರಾಸಂಗಿಕವಾಗಿ ವಿವರಿಸಲಾಗುವುದು.

ನಾಗಪುರ ಸಮೀಪದಲ್ಲಿರುವ ಜುನಾಪಾನಿ ನೆಲೆಯಲ್ಲಿ ೧೮೭೯ರಲ್ಲಿ ಜೆ.ಹೆಚ್.ರಿವೆಟ್ ಕಾರ್ನೆಕ್‌ರವರು ಉತ್ಖನನ ಕೈಗೊಂಡು ಹಲವು ಕುರುಹುಗಳನ್ನು ಬೆಳಕಿಗೆ ತಂದರು. ಈ ನೆಲೆಯಲ್ಲಿ ೧೩೦ ಕಲ್ಲು ವೃತ್ತಗಳು ದೊರಕಿರುವುದು ವಿಶೇಷವಾಗಿದೆ.[೬] ಬೃಹತ್ ಶಿಲಾಯುಗ ಸಂಸ್ಕೃತಿಯ ಅವಶೇಷಗಳು ದಖನ್‌ನಲ್ಲಿ ತಾಮ್ರಶಿಲಾಯುಗದ ಅವಶೇಷಗಳ ಸಮಕಾಲೀನ ಸ್ಥರಗಳಲ್ಲಿ ದೊರಕಿವೆ.

ತಾಮ್ರ ಶಿಲಾಯುಗದ ಮುಂದುವರಿಕೆಯನ್ನು ಮೆಹೋರ್‌ಜಾರ್ ನೆಲೆಯಲ್ಲಿ (Mahurjhar) ಬಿ.ಕೆ. ಥಾಪರ್‌ರವರು ಉತ್ಖನನ ನಡೆಸಿ ಕಬ್ಬಿಣ ಹಿಡಿಕೆಯುಳ್ಳ ಖಡ್ಗವನ್ನು ಶೋಧಿಸಿದರು. ಈ ನೆಲೆಯು ನಾಗಪೂರ್‌ನ ಪಶ್ಚಿಮಕ್ಕೆ ೧೫.ಕಿ.ಮೀ ದೂರದಲ್ಲಿದೆ. ಈ ಸಂಸ್ಕೃತಿಯ ಜನರು ಸಾಮಾನ್ಯವಾಗಿ ಚಿತ್ರಾಲಂಕೃತವಾಗಿರುವ ಕಪ್ಪು-ಕೆಂಪು ಇಲ್ಲವೆ. ಆಭ್ರಕಯುಕ್ತ (Micacous) ಕೆಂಪು ಬಣ್ಣದ ಮೃತ್ಪಾತ್ರೆಗಳನ್ನು ಉಪಯೋಗಿಸುತ್ತಿದ್ದರೆಂದು ವಿದರ್ಭ ಪ್ರದೇಶದ ಕೆಲವೊಂದು ನೆಲೆಗಳ ಉತ್ಖನನದಿಂದ ತಿಳಿದು ಬರುತ್ತದೆ.

ವಾಸ್ತವ್ಯ ಮತ್ತು ಸ್ಮಶನನೆಲೆಗಳಲ್ಲಿ ಕಂಡುಬರುವ ಬಹುಮುಖ್ಯವಾದ ವ್ಯತ್ಯಾಸವೆಂದರೆ, ಸಾಧಾರಣವಾಗಿ ವಾಸ್ತವ್ಯದ ನೆಲೆಗಳಲ್ಲಿ ಚಿತ್ರಾಲಂಕೃತ ಮೃತ್ಪಾತ್ರೆಗಳು ದೊರೆತರೆ ಸ್ಮಶಾನ ನೆಲೆಗಳಲ್ಲಿ ಇವುಗಳ ಸಂಖ್ಯೆ ಕಡಿಮೆ ಪ್ರಮಾಣದಲ್ಲಿ ದೊರೆತಿವೆ. ೧೯೬೦-೭೧ರಲ್ಲಿ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆ ಕಾಶ್ಮೀರ ರಾಜ್ಯದ ಶ್ರೀನಗರ ಜಿಲ್ಲೆಯ ಬೂರ್ಜಹೋಮ್ ನೆಲೆಯ ನಿಲುಸುಗಲ್ಲೊಂದರ ಬಳಿ ಉತ್ಖನನ ನಡೆಸಿ ಕೆಂಪು ಬಣ್ಣದ ಮಡಿಕೆಗೆ ಹೊಳಪು ನೀಡಿದ ಮಡಿಕೆಗಳು ಜೊತೆಗೆ ಉಜ್ಜಿ ಹೊಳಪುಗೊಳಿಸಿದ ನವಶಿಲಾಯುಗದ ಆಯುಧಗಳು ಮತ್ತು ಮೂಳೆಯ ಆಯುಧಗಳು ದೊರೆತಿವೆ. ಹಾಗೂ ಬೃಹತ್ ಶಿಲಾಯುಗಕ್ಕೆ ಸಂಬಂಧಿಸಿದಂತೆ (೨-೫ನೇಯ ಸ್ತರದಲ್ಲಿ) ಅವಶೇಷಗಳು ಕಂಡುಬಂದಿವೆ.[೪೦]

ರಾಜಸ್ತಾನ ಮತ್ತು ಗುಜರಾತ್ ರಾಜ್ಯಗಳಲ್ಲಿ ಸಿಂಧೂ ನದಿಯ ಬಯಲಿನ ಸಂಸ್ಕೃತಿ ಹಾಗೂ ಅದರ ಸಮಕಾಲೀನ ಸಂಸ್ಕೃತಿ ನೆಲೆಗಳ ಬಗೆಗೆ ಉತ್ಖನನಗಳು ನಡೆದಿವೆ. ಸುರಕೋಟಾದ ವಸತಿ ನಿವೇಶನದ ವಾಯುವ್ಯ ದಿಕ್ಕಿನಲ್ಲಿರುವ ಸ್ಮಶಾನ ಭೂಮಿಯಲ್ಲಿ ನಡೆಸಿದ ಉತ್ಖನನದಲ್ಲಿ ಬೃಹತ್‌ಗಾತ್ರದ ಮುಚ್ಚಳಕಲ್ಲುಗಳ ಅಂಡಾಕಾರದ ಕುಣಿ ಬೆಳಕಿಗೆ ಬಂದಿದ್ದು ಇದರೊಳಗೆ ಮಣ್ಣಿನ ಪಾತ್ರೆಗಳಿರುವುದು ಕಂಡು ಬರುತ್ತದೆ. ರಾಯಪುರದಲ್ಲಿ ಶಿಲಾವೃತ್ತದಿಂದ ಆವೃತ್ತವಾದ ಶವಕುಣಿಗಳೂ ಹಾಗೂ ಬಾಗಿ ಮೊಹರಿನ ಉತ್ಖನನದಲ್ಲಿ ದೊರೆತ ಶಿಲಾ ಪೆಟ್ಟಿಗೆಯುಳ್ಳ ಕುಣಿ ಶಿಲಾ ವೃತ್ತಗಳಲ್ಲೂ ದೊರೆತಿವೆ. ತೇಕಲ್ ಘಾಟ್ ನೆಲೆಯು ಬಹುಮುಖ್ಯವಾದ ಬೃಹತ್‌ಶಿಲಾಯುಗದ ನೆಲೆಯಾಗಿದ್ದು ಇಲ್ಲಿ ದೊರೆತ ಅವಶೇಷಗಳು ಮೆಹೋರ್ ಜಾರ್ ಮತ್ತು ಆದಿ ಚನಲ್ಲೂರಿನಲ್ಲಿಯೂ ಸಹ ಕಂಡುಬಂದಿವೆ.

೧೯೦೩-೦೪ರಲ್ಲಿ ಅಲೆಕ್ಸಾಂಡರ್ ರೀರ್ ಇವರು ತಮಿಳುನಾಡಿನ ಆದಿ ಚನಲ್ಲೂರ್ ಮತ್ತು ೧೯೦೭-೮ರಲ್ಲಿ ಚಂಗಲ್ಪೇಟ್ ಜಿಲ್ಲೆಯ ಪೆರಂಬಿಯಾರ್‌ನ ಕಲ್ಗೋರಿನೆಲೆಗಳಲ್ಲಿ ನಡೆಸಿರುವ ಉತ್ಖನನಗಳಲ್ಲಿ ದೊರೆತ ಕುರುಹುಗಳ ವರದಿಯನ್ನು ೧೯೧೫ರಲ್ಲಿ ವಿವರವಾಗಿ ಪ್ರಕಟಿಸಿದರು.[೪೧]

೧೯೪೮ರಲ್ಲಿ ಥಾಪರ್‌ರವರು ಪೋರ್ಕಳಂ ನೆಲೆಯಲ್ಲಿ ಉತ್ಖನನಕೈಗೊಂಡು ಈ ಸಂಸ್ಕೃತಿಗೆ ಸಂಬಂಧಿಸಿದವುಗಳಾದ ಕಲ್ಗೋರಿಗಳು ಹೆಚ್ಚಾಗಿ ದೊರಕಿರುವುದನ್ನು ಕುರಿತು ಸಂಗ್ರಹಿಸಿ ಬೃಹತ್‌ಶಿಲಾ ಸಮಾಧಿಗಳ ಉಗಮ ಮತ್ತು ವಿಕಾಸ ಅವುಗಳ ನಿರ್ಮಾಣದ ಕುರಿತು ಹೆಸರಿಸಿ, ವಿಶ್ಲೇಷಣೆ ಮತ್ತು ಪ್ರಾದೇಶಿಕವಾಗಿ ಭಿನ್ನವಾಗಿರುವುದನ್ನು ಕುರಿತು ಹೆಚ್ಚಿನ ಅಧ್ಯಯನ ನಡೆಸಲು ಕಾರಣರಾದರು.

ಹೀಗೆ ವಿವಿಧ ರಾಜ್ಯಗಳಲ್ಲಿ ಹಲವು ವಿದ್ವಾಂಸರು ಈ ಕ್ಷೇತ್ರದಲ್ಲಿ ಸಂಶೋಧನೆ ಕೈಗೊಂಡು ಮಹತ್ತರವಾದ ಅಂಶಗಳನ್ನು ಬೆಳಕಿಗೆ ತಂದಿದ್ದಾರೆ.[೪೨] ಇದೇ ರೀತಿ ಕರ್ನಾಟಕದಲ್ಲಿ ಇದುವರೆಗೆ ಉತ್ಖನನ ಕೈಗೊಂಡ ಪ್ರಮುಖ ನೆಲೆಗಳನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

ಬ್ರಹ್ಮಗಿರಿ (ಎಂ.ಹೆಚ್.ಕೃಷ್ಣ : ೧೯೪೨ ಮಾರ್ಟಿಮರ್‌ವೀಲ್ಹರ್ : ೧೯೪೮) ಚಂದ್ರವಳ್ಳಿ (ಎಂ.ಹೆಚ್.ಕೃಷ್ಣ :೧೯೨೮ ಮಾರ್ಟಿಮರ್‌ವೀಲ್ಹರ್ :೧೯೪೮) ಮಸ್ಕಿ (ಥಾಪರ್ : ೧೯೭೫) ಪಿಕ್ಲಿಹಾಳ್ (ಆಲ್ಚಿನ್ : ೧೯೬೦) ಹಳ್ಳೂರು (ನಾಗರಾಜರಾವ್ : ೧೯೭೧) ಟಿ.ನರಸೀಪುರ (ಶೇಷಾದ್ರಿ : ೧೯೭೧) ಕೊಡೆಕಲ್ (ಪೆದ್ದಯ್ಯ : ೧೯೩೩) ಹೆಮ್ಮಿಗೆ (ಹನುಮಂತರಾವ್ ಮತ್ತು ನಾಗರಾಜರಾವ್ ಎಂ.ಎಸ್ ೧೯೭೯) ಬನವಾಸಿ (ಶೇಷಾದ್ರಿ ಎಂ : ೧೯೭೦-೭೪) ವಡಗಾಂವ್ ಮಾಧವಪುರ (ಸುಂದರ ಅ.೧೯೭೪)[೪೩] ಹೀಗೆ ಹಲವು ನೆಲೆಗಳಲ್ಲಿ ಉತ್ಖನನ ಕೈಗೊಂಡು ವಿವಿಧ ಕಾಲಘಟ್ಟದ ಅವಶೇಷಗಳನ್ನು ಹೊರತಂದಿದ್ದಾರೆ. ಇದೇ ರೀತಿ ಪ್ರಸ್ತುತ ಅಧ್ಯಯನ ಪ್ರದೇಶವು ಬಳ್ಳಾರಿ ಜಿಲ್ಲೆಯಲ್ಲಿ ಕಂಡುಬರುವುದರಿಂದ ಈ ಜಿಲ್ಲೆಯಲ್ಲಿ ಉತ್ಖನನ ಕೈಗೊಂಡ ನೆಲೆಗಳನ್ನು ಮಾತ್ರ ಈ ಕೆಳಗಿನಂತೆ ವಿವರಿಸಲಾಗಿದೆ.

ಬಳ್ಳಾರಿ ತಾಲ್ಲೂಕಿನಲ್ಲಿರುವ ಸಂಗನಕಲ್ಲು ನೆಲೆಯು ಜಿಲ್ಲಾ ಕೇಂದ್ರದಿಂದ ೧೨ಕಿ.ಮೀ ದೂರದಲ್ಲಿದೆ. ಮೊದಲ ಬಾರಿಗೆ ಸುಬ್ಬರಾವ್ ಅವರು ೧೯೪೮ರಲ್ಲಿ ಉತ್ಖನನ ನಡೆಸಿ ಬ್ರಹ್ಮಗಿರಿ ಮತ್ತು ಇತರೆ ನೆಲೆಗಳಿಗಿಂತಲೂ ಹೊರತಾದ ಕೆಲವು ಪ್ರಾಕ್‌ಚಾರಿತ್ರ್ಯಕ ಕುರುಹುಗಳನ್ನು ಶೋಧಿಸಿದ್ದಾರೆ.[೪೪] ಉತ್ಖನನದಲ್ಲಿ ದೊರೆತ ಇಲ್ಲಿನ ಮೇಲಿಂದ ಕೆಳಗಿನ ಸ್ತರಗಳನ್ನು ಆಧಾರವಾಗಿಟ್ಟುಕೊಂಡು ಅಂದಿನ ಸಾಂಸ್ಕೃತಿಕ ಹಂತಗಳನ್ನು ಅಧ್ಯಯನ ಮಾಡಬಹುದು. ಮೊದಲನೆಯ ಹಂತ ಬೃಹತ್‌ಶಿಲಾಯುಗ ಹಂತವಾಗಿದ್ದು, ಕೈಗೊಡಲಿ ಸಂಸ್ಕೃತಿಯಲ್ಲಿ ಮಿಲನವಾಗಿರುವುದನ್ನು ಗುರುತಿಸಬಹುದು. ನಂತರದ ಸ್ತರದಲ್ಲಿ ನೂತನ ಶಿಲಾಯುಗ ಹಂತದ ಕೈಗೊಡಲಿಗಳನ್ನು ಪತ್ತೆಹಚ್ಚಲಾಗಿದೆ. ಈ ಸಂಸ್ಕೃತಿಯ ಹೆಚ್ಚಿನ ಅಧ್ಯಯನವನ್ನು ಜಡ್.ಡಿ.ಅನ್ಸಾರಿ ಮತ್ತು ಎಂ.ಎಸ್.ನಾಗರಾಜ್‌ರವರು ೧೯೬೪-೬೫ರಲ್ಲಿ ಉತ್ಖನನಕೈಗೊಳ್ಳುವುದರ ಮೂಲಕ ಮತ್ತೆ ಮೇಲಿನ ಹಂತಗಳಲ್ಲದೆ ಸೂಕ್ಷ್ಮಶಿಲಾಯುಗಕ್ಕೂ ಮುಂಚಿನ ಹಂತವನ್ನು ಸಂಕಾಲಿಯವರ ನೇತೃತ್ವದಲ್ಲಿ ಗುರುತಿಸಿದರು. ಹಾಗೂ ಮೂರು ತಡಿಕೆ ಮನೆ ನೆಲಗಟ್ಟುಗಳು, ಬೂದುಬಣ್ಣದ ಪಾತ್ರೆ, ಉಜ್ಜಿನಯಗೊಳಿಸಿದ ಕೊಡಲಿಗಳು ಕಂಡುಬಂದವು. ಕಂದು ಮತ್ತು ಕಪ್ಪು ದ್ವಿವರ್ಣದ ಪಾತ್ರೆಗಳೂ, ಉಜ್ಜಿದ ಬೂದು ವರ್ಣದ ಪಾತ್ರೆಗಳು, ತಿಗುರಿಯ ಮೇಲೆ ಮಾಡಿದ ನೇರಳೆ ವರ್ಣದ ಚಿತ್ರವುಳ್ಳ ಮಂದ ಕೆಂಪು ಬಣ್ಣದ ಪಾತ್ರೆಯ ಕೆಲವೊಂದು ಚೂರುಗಳು ಇಲ್ಲಿ ದೊರೆತಿರುವುದು ವಿಶಿಷ್ಟವಾಗಿದೆ.

ಸಿ-೧೪ ಕಾಲನಿರ್ಣಯದ ಪ್ರಕಾರ ನವಶಿಲಾಯುಗದ ಪ್ರಾರಂಭವನ್ನು ಪ್ರ.ಶ.ಪೂ೧೬೦೦ ಎಂದು ಅಂದಾಜಿಸಲಾಗಿದೆ. ಕೊನೆಯಹಂತವು ನವಶಿಲಾಯುಗ - ಬೃಹತ್‌ಶಿಲಾಯುಗ ನಡುವಣ

ಸ್ಥಿತ್ಯಂತರ ಅವಧಿಯಾಗಿದ್ದು ಇಲ್ಲಿ ಕೈಯಿಂದ ಮಾಡಿದ ನವಶಿಲಾಯುಗದ ಮಣ್ಪಾತ್ರಗಳೊಂದಿಗೆ ಬೃಹತ್ ಶಿಲಾಯುಗದ ಕಪ್ಪು-ಕೆಂಪು ದ್ವಿವರ್ಣದ ಪಾತ್ರೆಗಳು ಕಂಡುಬಂದಿವೆ.

ಕಪ್ಪಗಲ್ಲು ನೆಲೆಯು ಬಳ್ಳಾರಿ ತಾಲೂಕು ಕೇಂದ್ರದಿಂದ ೯.ಕಿ.ಮೀ ದೂರದಲ್ಲಿದೆ. ಈ ನೆಲೆಯನ್ನು ಮೊದಲ ಬಾರಿಗೆ ಮಾನವಶಾಸ್ತ್ರಜ್ಞ ಕ್ಯಾಬೇಲ್ದರ್ ಉತ್ಖನನ ಕೈಗೊಂಡರು. ನಂತರ ಮಂಜುಮ್‌ದಾರ್ ಜಿ.ಜಿ ಮತ್ತು ರಾಜಗುರು ಎಸ್.ಎನ್. ಇವರು ಹೆಚ್ಚಿನ ಶೋಧನೆ ಮಾಡಿದರು.[೬೫] ಸಂಗನಕಲ್ಲು ಗ್ರಾಮದ ಸಮೀಪದಲ್ಲಿರುವ ಒಂದು ಹಳ್ಳಿ, ಸಂಗನಕಲ್ಲಿನ ಪ್ರಾಚೀನ ನೆಲೆಯಿರುವ ಸಣ್ಣರಸಮ್ಮ ಗುಡ್ಡದ ಒಂದು ಬದಿಯ ಬಯಲಿನಲ್ಲಿದ್ದ ಬೂದಿಗುಡ್ಡಗಳನ್ನು ಉತ್ಖನನ ನಡೆಸಿದ ವಿಲಿಯಂ ಪ್ರೋಜ್ ಅವರು ೧೯೬೪ರ ನಂತರ ಅಲ್ಲಿಯ ಬೂದಿ ಗುಡ್ಡೆಗಳನ್ನು ಪರಿಶೀಲಿಸಿ ಅವುಗಳ ಬಗ್ಗೆ ವರದಿಯನ್ನು ತಯಾರಿಸಿ ಪುಸ್ತಕದಲ್ಲಿ ಸೇರಿಸಿದ್ದಾರೆ. ಇವರ ಪ್ರಕಾರ ಕಿಟ್ಟದಂತಹ ಸಗಣಿಯನ್ನು ಸುಮಾರು ೮೦೦-೧೨ ಸೆಂಟಿಗ್ರೇಡ್ ಸುಟ್ಟಾಗ ನಿರ್ಮಾಣವಾದಂತಹ ದಿಬ್ಬಗಳೇ ಬೂದಿಗುಡ್ಡುಗಳು ಎಂಬ ಅಭಿಪ್ರಾಯಕ್ಕೆ ಬಂದಿದ್ದಾರೆ.

ಬಳ್ಳಾರಿ ಜಿಲ್ಲೆಯ ಸಿರುಗುಪ್ಪ ತಾಲೂಕಿನಲ್ಲಿರುವ ತೆಕ್ಕಲಕೋಟೆ ನೆಲೆಯು ಜಿಲ್ಲಾ ಕೇಂದ್ರದಿಂದ ದಕ್ಷಿಣಕ್ಕೆ ೪೨ ಕಿ.ಮೀ ದೂರದಲ್ಲಿದೆ. ಆದೋನಿಯಿಂದ ೬.ಕಿ.ಮೀ ದೂರದಲ್ಲಿದೆ. ನವಶಿಲಾಯುಗ, ಶಿಲಾ-ತಾಮ್ರಯುಗ ಸಂಸ್ಕೃತಿಯ ಕಾಲ ಘಟ್ಟಕ್ಕೆ ಸೇರಿದ ಈ ನೆಲೆಯಲ್ಲಿ ಆರ್.ಬಿ ಫೂಟ್ ರವರು ಪ್ರಾಗೈತಿಹಾಸಿಕ ಅವಶೇಷಗಳನ್ನು ಪತ್ತೆಹಚ್ಚಿದರು. ನಂತರ ೧೯೬೩ ರಲ್ಲಿ ಮಲ್ಹೋತ್ರ ಕೆ.ಸಿ ಮತ್ತು ಎಮ್.ಎಸ್ ನಾಗರಾಜ್‌ರವರು ಉತ್ಖನನ ನಡೆಸಿ ಮೃತ್ಪಾತ್ರೆಗಳು ಮೊದಲಾದ ಉಪಕರಣಗಳನ್ನು ಶೋಧಿಸಿದ್ದಾರೆ.[೪೬]

ನಂತರ ೧೯೬೩-೬೪ರಲ್ಲಿ ಸಂಕಾಲಿಯ ಸ್ನಾತಕೋತ್ತರ ಪರಿಶೋಧನಾ ಸಂಸ್ಥೆ ಪುಣೆ ಮತ್ತು ಕನ್ನಡ ಅಧ್ಯಯನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ಇವರ ಆಶ್ರಯದಲ್ಲಿ ಉತ್ಖನನ ನಡೆಸಿ ತಾಮ್ರದ ಸುರುಳಿ, ಕಲ್ಲಿನ ಕೊಡಲಿ, ಜಿಂಕೆಯ ಕವಲುಗೊಂಬು, ಮೇಗಿಗಳು, ಬ್ಲೇಡ್‌ಗಳು, ಸ್ಪಟಿಕದ ಶಿಲೆ ಹಾಗೂ ಚಿನ್ನದ ಮಗ್ರಿಪಟ್ಟಿ, ಕಲ್ಲುಮುಳ್ಳುಗಳು, ಬೂದು ಬಣ್ಣದ ಮಡಿಕೆಗಳು, ಕಪ್ಪು-ಕೆಂಪು ಕಂದು ಬಣ್ಣದ ಕಪ್ಪು ಮಿಶ್ರಿತ ಮಡಕೆಗಳು ದೊರೆತಿದ್ದು ಅಂದಿನ ಜೀವನ ಕ್ರಮ ಅರಿಯಲು ಸಹಾಯಕವಾಗಿವೆ. ಈ ಉತ್ಖನನದ ನಂತರ ಶಿಲಾಯುಗ ಸಂಸ್ಕೃತಿಯ ಬೆಳವಣಿಗೆಯಲ್ಲಿ ೧. ಶಿಲಾ ತಾಮ್ರ ಹಂತದಲ್ಲಿಯ ನೂತನ ಶಿಲಾಯುಗ ಸಂಸ್ಕೃತಿ ೨. ಈ ಸಂಸ್ಕೃತಿಯ ಅಂತ್ಯದ ಪ್ರಾಚೀನ ಹಂತ ಎಂದು ಎರಡು ಉಪಹಂತಗಳನ್ನು ಗುರುತಿಸಬಹುದು.[೪೭] ಉತ್ಖನನದಲ್ಲಿ ದೊರೆತ ಮೃತ್ಪಾತ್ರೆಗಳು ಚಿತಾಭಸ್ಮವನ್ನು ಇಟ್ಟಿರುವ ಕುಂಭಗಳು, ಅಸ್ತಿ, ಮೃತ್ಪಾತ್ರೆಗಳು. ಮಕ್ಕಳ ಮತ್ತು ದೊಡ್ಡವರ ಅಸ್ಥಿಗಳು ಹೀಗೆ ಇನ್ನೂ ಹಲವು ಅಂಶಗಳು ತೆಕ್ಕಲಕೋಟೆ ಉತ್ಖನನದಿಂದ ಬೆಳಕಿಗೆ ಬಂದಿವೆ.

ನಿಟ್ಟೂರು ಬಳ್ಳಾರಿ ಜಿಲ್ಲಾ ಕೇಂದ್ರದಿಂದ ೧೮.ಕಿ.ಮೀ ದೂರದಲ್ಲಿರುವ ಈ ನೆಲೆಯನ್ನು ಜಡ್.ಡಿ ಅನ್ಸಾರಿಯವರು ಹೆಚ್.ಡಿ ಸಂಕಾಲಿಯಾ ಅವರ ನೇತೃತ್ವದಲ್ಲಿ ಉತ್ಖನನ ನಡೆಸಿದರು.[೪೮] ಈ

ನೆಲೆಯು ಕಪ್ಪಗಲ್ಲು ಮತ್ತು ಇತರೆ ನೆಲೆಗಳಿಗಿಂತ ಮಹತ್ವದ ಕುರುಹುಗಳನ್ನು ಒಳಗೊಂಡಿರುವ ಸ್ಥಳವಾಗಿದೆ. ಇಲ್ಲಿನ ಉತ್ಖನನದ ಸ್ತರಗಳನ್ನು ಆಧಾರವಾಗಿಟ್ಟುಕೊಂಡು ಅಂದಿನ ಸಾಂಸ್ಕೃತಿಕ ಹಂತಗಳನ್ನು ಅಧ್ಯಯನ ಮಾಡಬಹುದು. ಮೊದಲನೆಯ ಸ್ತರವು ಬೃಹತ್ ಶಿಲಾಯುಗ ಹಂತದ್ದು, ಇದು ಕೈಗೊಡಲಿ ಸಂಸ್ಕೃತಿಯೊಂದಿಗೆ ಮಿಲನವಾಗಿರುವುದು ತಿಳಿದುಬರುತ್ತದೆ. ಇದರ ತಳಭಾಗದಲ್ಲಿ ಯಾವುದೇ ಮೃತ್ಪಾತ್ರೆಗಳು ದೊರಕಿರುವುದಿಲ್ಲ. ಆದರೆ ಸೂಕ್ಷ್ಮ ಶಿಲಾಯುಗದ ಉಪಕರಣಗಳು ಹೆಚ್ಚಾಗಿ ಕಂಡುಬರುವುದರಿಂದ ಈ ನೆಲೆಯು ಸೂಕ್ಷ್ಮಶಿಲಾಯುಗದ ಕಾಲದ ಉಪಕರಣ ತಯಾರಿಸುವ ತಾಣವಾಗಿತ್ತೆಂದು ಹೇಳಬಹುದು.

ಕುಡುತಿನಿ ನೆಲೆಯು ಬಳ್ಳಾರಿಯಿಂದ ೨೫ ಕಿ.ಮೀ ದೂರದಲ್ಲಿದೆ. ಇದನ್ನು ಬೂದಿಕಣಮ, ಬೂದಿಗುಂಟ ಎಂದು ಕರೆಯಲಾಗುತ್ತದೆ. ದಿಬ್ಬದ ಪೂರ್ವಕ್ಕಿರುವ ಬಳ್ಳಾರಿ ಗುಡ್ಡ ಹಾಗೂ ಪಶ್ಚಿಮಕ್ಕೆ ೩.ಕಿ.ಮೀ ದೂರದಲ್ಲಿರುವ ತೋರಣಗಲ್ಲು ಗುಡ್ಡದ ಬಳಿ ನವಶಿಲಾಯುಗದ ವಸತಿ ಅವಶೇಷಗಳಿವೆ. ೧೮೪೦ರ ದಶಕದಲ್ಲಿ ನ್ಯೂಬೋಲ್ಡ್ ಈ ದಿಬ್ಬವನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ೧೪.ಮೀ ಎತ್ತರ ೧೨೬.ಮೀ. ಸುತ್ತಳತೆಯನ್ನು ಹೊಂದಿತ್ತು. ಇದೇ ಶತಮಾನದ ಕೊನೆಯ ದಶಕದಲ್ಲಿ ಕೋಲ್ ಹಾಗೂ ಬ್ರೂಸ್‌ಫೂಟ್ ಇಲ್ಲಿ ಸರ್ವೇಕ್ಷಣೆ ನಡೆಸಿದರು. ಕಲ್ಲಿನಕೊಡಲಿ, ಮಣ್ಪಾತ್ರೆ, ಅರೆಯುವ ಕಲ್ಲು ಮುಂತಾದ ಅವಶೇಷಗಳನ್ನು ಇಲ್ಲಿಂದ ಸಂಗ್ರಹಿಸಿದ ಬ್ರೂಸ್‌ಫೂಟ್ ಜಾನುವಾರುಗಳ ಸಗಣಿಯನ್ನು ಇಲ್ಲಿ ರಾಶಿ ಹಾಕಿ ಸುಟ್ಟಿದ್ದರಿಂದ ದಿಬ್ಬ ನಿರ್ಮಾಣಗೊಂಡಿರಬೇಕೆಂದು ತರ್ಕಿಸಿದ್ದಾರೆ.[೪೯]

೨೦೦೩ರಲ್ಲಿ ಕೋರಿ ಸೆಟ್ಟರ್ ಅವರ ತಂಡ ಇಲ್ಲಿ ಅಗೆದ ಪರೀಕ್ಷಾ ಗುಂಡಿಯಲ್ಲಿ ಒಂದರ ಮೇಲೊಂದಿಟ್ಟು ೩ ಪೂರ್ಣ ಮಡಿಕೆಗಳ ಕೆಳಗೆ, ಮಣ್ಣಿನ ಆರು ಕಾಲಿನ ಶವ ಪೆಟ್ಟಿಗೆ ಇದರೊಳಗೆ ೬-೭ ವರ್ಷದ ಮಗುವನ್ನು ಸಮಾಧಿಗೊಳಿಸಿದ್ದ ಮಹತ್ವದ ಅಂಶವನ್ನು ಬೆಳಕಿಗೆ ತಂದರು.[೫೦] ಉತ್ತರ – ದಕ್ಷಿಣಾಭಿಮುಖವಾಗಿದ್ದ ಈ ಪೆಟ್ಟಿಗೆಯ ಸುತ್ತಲಿಟ್ಟಿದ್ದ ೧೩ ಮಡಿಕೆಗಳಲ್ಲೂ ಮಗುವಿನ ಕೆಲವೊಂದು ಮೂಳೆಗಳನ್ನು ಇಡಲಾಗಿತ್ತು. ಈ ಸಮಾಧಿ ನವಶಿಲಾಯುಗದ ಅಂತಿಮ ಹಂತಕ್ಕೆ ಸೇರುತ್ತದೆ. ಎಂದು ಅಭಿಪ್ರಾಯಪಟ್ಟಿದ್ದಾರೆ. ಹೀಗೆ ಬಳ್ಳಾರಿ ಜಿಲ್ಲೆಯಲ್ಲಿ ಉತ್ಖನನ ಕೈಗೊಂಡ ನೆಲೆಗಳಲ್ಲಿ ದೊರೆತ ಅವಶೇಷಗಳು ಮತ್ತು ಅವುಗಳ ಸಾಂಸ್ಕೃತಿಕ ಕಾಲಮಾನವನ್ನು ನಿರ್ಧರಿಸಲು ಸಹಾಯಕವಾಗಿವೆ.

### ೨) ಅನ್ವೇಷಣಾ ನೆಲೆಗಳು

ವಿವಿಧ ವಿಶ್ವವಿದ್ಯಾಲಯಗಳ ಸಂಶೋಧಕರು, ವಿದ್ವಾಂಸರು ಹಾಗೂ ಹವ್ಯಾಸಿ ಸಂಶೋಧಕರು ಉದ್ದೇಶಿತವಾಗಿ ಇಲ್ಲವೆ ಆಕಸ್ಮಿಕವಾಗಿ ಶೋಧಿಸಿದ ಶಿಲಾಸಮಾಧಿಗಳು, ಆಯುಧೋಪಕರಣಗಳು, ಮಡಿಕೆಗಳು, ಗೀರುಚಿತ್ರ, ಮೊದಲಾದ ಕುರುಹುಗಳನ್ನು ಪತ್ತೆಹಚ್ಚಿದ ನೆಲೆಗಳ ಅನ್ವೇಷಣೆಯ

ನೆಲೆಗಳಾಗಿವೆ. ಭಾರತದಲ್ಲಿ ಹಲವು ಪ್ರದೇಶಗಳಲ್ಲಿ ಅನ್ವೇಷಣಾ ನೆಲೆಗಳು ಕಂಡುಬಂದಿವೆ. ಅವುಗಳಲ್ಲಿ ಪ್ರಮುಖವಾದವುಗಳನ್ನು ಕೆಳಗಿನಂತೆ ಸಂಕ್ಷಿಪ್ತವಾಗಿ ವಿವರಿಸಲಾಗುವುದು.

ಕಾರ್ಲೇಲ್‌ರವರು ೧೮೭೧ರಲ್ಲಿ ಉತ್ತರ ಪ್ರದೇಶ ರಾಜ್ಯದ ಫತೇಪುರ ಸಿಕ್ರಿಯ ಪಶ್ಚಿಮ ದಿಕ್ಕಿನಲ್ಲಿರುವ ಖೀರಾ ಮತ್ತು ಜಾಗ್ನೇರ್ ನೆಲೆಗಳ ಕಲ್ಲುಗುಪ್ಪೆಗಳನ್ನು ಶೋಧಿಸಿದ್ದಾರೆ.[೫೧] ಕಾರ್‌ಬರ್ಗ್‌ರವರು ೧೮೯೪ರಲ್ಲಿ ಮಿರ್ಜಾಪುರ ಸಮೀಪ ಈ ಸಂಸ್ಕೃತಿಯ ಮತ್ತಷ್ಟು ನೆಲೆಗಳನ್ನು ಪತ್ತೆಹಚ್ಚಿದ್ದಾರೆ. ೨೦ನೇ ಶತಮಾನದಲ್ಲಿ ಉತ್ತರದ ಗಂಗಾನದಿ ಕಣಿವೆಯಿಂದ ಹಿಡಿದು ದಕ್ಷಿಣದ ವಿಂದ್ಯಪರ್ವತ ಶ್ರೇಣಿಯ ತಪ್ಪಲಿನವರೆಗೂ ವಿವಿಧ ಮಾದರಿಯ ಕಲ್ಗೋರಿಗಳನ್ನು ಪುರಾತತ್ವಜ್ಞರು ಪತ್ತೆ ಹಚ್ಚಿದ್ದಾರೆ. ಇವುಗಳಲ್ಲಿ ವಾರಣಾಸಿಯ ಬಾಂದ್ ಪ್ರದೇಶದಲ್ಲಿನ ಕಲ್ಲುಗುಪ್ಪೆಗಳು, ಅಲಹಾಬಾದ್ ಪ್ರದೇಶದಲ್ಲಿನ ಮಿರ್ಜಾಪುರದ ಕುಣಿಸಮಾಧಿ ಅಸ್ತಿ ಪಾತ್ರೆದಫನ್ (Unburial) ಬಹು ಮುಖ್ಯವಾದವುಗಳು.[೫೨] ಈ ಕುಣಿ ಸಮಾಧಿಗಳು ದಕ್ಷಿಣ ಭಾರತದಲ್ಲಿ ಕಂಡು ಬರುವ ಕುಣಿಸಮಾಧಿಗಳಿಗಿಂತ ಅತಿಸಣ್ಣವಾಗಿವೆ.

ಈಶಾನ್ಯ ಭಾರತದಲ್ಲಿ ನಿಲುಸುಗಲ್ಲು ಮತ್ತು ಕಲ್ಮನೆ (Dolmen) ಗಳೇ ಪ್ರಮುಖ ಶಿಲಾ ಸಮಾಧಿಗಳಾಗಿವೆ. ದೋಮಾಪುರ ಮತ್ತು ಅಸ್ಸಾಂ ಪ್ರದೇಶದ ಜಮಗುರಿ ನೆಲೆಗಳಲ್ಲಿ ೧೯೨೩ರಲ್ಲಿ ದೊರೆತ ಕಲ್ಗೋರಿಗಳು ಈ ಪ್ರದೇಶದ ಮೊದಲ ಅನ್ವೇಷಣೆಗಳಾಗಿದ್ದು, ಮಣಿಪುರದ ಚುರಚಾಂದ್‌ಪುರ ಮತ್ತು ಉಕ್ರುಲ್ ಜಿಲ್ಲೆಗಳಲ್ಲಿ ಇತ್ತೀಚೆಗೆ ನಡೆದ ಸ್ಥಳ ಪರಿಶೋಧನೆಗಳಲ್ಲಿ ಅನೇಕ ನೆಲೆಗಳು ಬೆಳಕಿಗೆ ಬಂದಿವೆ.[೫೩]

ಭಾರತದ ಪೂರ್ವಭಾಗದ ಮೊದಲ ಶೋಧನೆಗಳು ಬಿಹಾರಿನ ಚೋಟಾನಾಗಪೂರ್ ಮತ್ತು ರಾಂಚಿ ಪ್ರದೇಶದ ಕಲ್ಗೋರಿ ಸಂಸ್ಕೃತಿಗಳ ಅಧ್ಯಯನಕ್ಕೆ ಪೂರಕವಾಗಿ ಹ್ಯಮನ್ ಡೋರ್ಪರ್‌ರವರು ೧೯೪೩ರಲ್ಲಿ ಮಾಡಿರುವ ಒರಸ್ಸಾದ ಸುಂದರ್ ಘರ್ ಜಿಲ್ಲೆಯ ಬ್ರಹ್ಮಣೀನದಿ ಕಣಿವೆಯಲ್ಲಿ ಸ್ಥಳ ಪರಿಶೋಧನೆಯಲ್ಲಿ ಸಾಕಷ್ಟು ನೆಲೆಗಳು ಬೆಳಕಿಗೆ ಬಂದಿವೆ.[೫೪] ಬಂಗ್ಲರ್ (ಕನ್ನಿಂಗ್ ಹ್ಯಾಮ್‌ರವರ ಸಹಾಯಕ) ೧೮೭೩-೭೪ರಲ್ಲಿ ಮಧ್ಯ ಭಾರತ ಪ್ರಾಂತ್ಯಗಳ ಶೋರಾರ ಗ್ರಾಮದ ಬಳಿಯ ಮೇಲ್ಮುಕವಾಗಿ ನಿಲ್ಲಿಸಿದ್ದ ನಿಲಸುಗಲ್ಲು ಹಾಗೂ ಚದುರಿ ಬಿದ್ದಿದ್ದ ಕಲ್ಲುಗಳ ಭಗ್ನವಶೇಷಗಳನ್ನು ವರದಿ ಮಾಡಿದರೂ ಸಮೇತ ಅದು ಹೆಚ್ಚು ಗಮನ ಸೆಳೆಯಲಿಲ್ಲ. ಆದರೆ ೧೯೩೩-೩೪ರಲ್ಲಿ ಇದೇ ನೆಲೆಯನ್ನು ಪುನರ್ ಪರಿಶೀಲನೆ ನಡೆಸಿದಾಗ ಅವು ಶಿಲಾಯುಗದ ಸ್ಮಶಾನ ನೆಲೆಗಳೆಂದು ಉಲ್ಲೇಖಿಸಲಾಯಿತು.[೫೫]

ಮಧ್ಯ ಪ್ರದೇಶದ ದಕ್ಷಿಣ ಹಾಗೂ ಪೂರ್ವಭಾಗಗಳಲ್ಲಿ ಪ್ರಮುಖವಾಗಿ ರಾಯಪುರ ಮತ್ತು ಬಸ್ತರ್ ಜಿಲ್ಲೆಗಳಲ್ಲಿ ಅನೇಕ ಬೃಹತ್ ಶಿಲಾಯುಗದ ನೆಲೆಗಳು ಸ್ಥಿರಪಡಿಸಿದವು.

ದಖನ್ ಪ್ರಸ್ಥಭೂಮಿ ಪ್ರದೇಶಗಳಲ್ಲಿ ಈ ಸಂಸ್ಕೃತಿಯ ನೆಲೆಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡು ಬಂದಿವೆ. ಈ ಪ್ರದೇಶದ ನೈಕುಂಡ ಮತ್ತು ತಾಕಲ್‌ಘಾಟ್ ನೆಲೆಗಳಲ್ಲಿ ವಸತಿಗಳು ಮತ್ತು

ಕಲ್ಲೋರಿಗಳು ಅಕ್ಕ ಪಕ್ಕದಲ್ಲಿ ಕಂಡು ಬಂದಿವೆ. ವಾರ್ಧಾ ಜಿಲ್ಲೆಯ ಪೌನಾರ್, ಖೈವಾಡ, ಅಮರಾವತಿ ಜಿಲ್ಲೆಯ ಕೌಂಡಿನ್ಯಪುರ, ಮಹೋರ್‌ಜಹಾಂ, ನಾಗಾಪುರ ಜಿಲ್ಲೆಯ ಜುನಾಪಾನಿ, ರಾಯಪುರ, ಧೂಲಿಯ ಜಿಲ್ಲೆಯ ರಂಜಾಳ ಮುಂತಾದ ನೆಲೆಗಳು ಈ ಪ್ರದೇಶದ ಮುಖ್ಯ ಬೃಹತ್ ಶಿಲಾಸಮಾಧಿ ನೆಲೆಗಳಾಗಿವೆ.[೫೬]

ತಮಿಳುನಾಡಿನಲ್ಲಿ ದೇಶಿಕನ್ ಕೆ.ವಿ.ರಾಮನ್, ಬಿ.ಕೆ ಗುರುರಾಜ್‌ರಾವ್, ಬಿ.ನರಸಿಂಹಯ್ಯ, ಆಂದ್ರಪ್ರದೇಶದಲ್ಲಿ ಬಿ.ಸುಬ್ಬರಾವ್, ಸುಬ್ರಹ್ಮಣ್ಯಂ, ಹೆಚ್.ಸರ್ಕಾರ್, ಸಂಪತ್‌ಪುಲ್ಲಾ ರೆಡ್ಡಿ, ಕೇರಳದಲ್ಲಿ ಜಾನ್, ಕರ್ನಾಟಕದಲ್ಲಿ ಮೇಡೋಸ್ ಟೇಲರ್, ಎಂ.ಎಸ್.ನಾಗರಾಜ್‌ರಾವ್, ಅ.ಸುಂದರ, ಡಿ.ವಿ ದೇವರಾಜ್ ಮೊದಲಾದವರು ಈ ಕ್ಷೇತ್ರದಲ್ಲಿ ಸಂಶೋಧನೆಗಳನ್ನು ನಡೆಸಿದ್ದಾರೆ.

ಕರ್ನಾಟಕದಲ್ಲಿ ಉತ್ತರ ಕನ್ನಡ ಜಿಲ್ಲೆಯೂ ಸೇರಿದಂತೆ ಎಲ್ಲ ಜಿಲ್ಲೆಗಳಲ್ಲಿ ಬೃಹತ್ ಶಿಲಾ ಸಮಾಧಿ ನೆಲೆಗಳು ಅಥವಾ ಬೃಹತ್ ಶಿಲಾಯುಗದ ನೆಲೆಗಳು ಒಟ್ಟು ೮೨೪ ನೆಲೆಗಳು ದೊರೆತಿವೆ.[೫೭] ಈ ಸಂಸ್ಕೃತಿಯ ನೆಲೆಗಳು ಹೆಚ್ಚಾಗಿ ಗಷ್ಟುಕಲ್ಲು ಮತ್ತು ಗ್ರಾನೈಟ್ ಶಿಲೆಯ ಬೆಟ್ಟ ಪ್ರದೇಶಗಳಲ್ಲಿ ಕಂಡು ಬಂದಿವೆ. ಬೆಳಗಾವಿ ಜಿಲ್ಲೆಯ ಮಧ್ಯಭಾಗ, ಬಾಗಲಕೋಟೆ, ಬಿಜಾಪುರ ಮತ್ತು ಗುಲ್ಬರ್ಗ ಜಿಲ್ಲೆಗಳ ದಕ್ಷಿಣಭಾಗದಲ್ಲಿ ರಾಯಚೂರು, ಕೊಪ್ಪಳ, ಬಳ್ಳಾರಿ, ಚಿತ್ರದುರ್ಗ ತುಮಕೂರು, ಕೋಲಾರ, ಬೆಂಗಳೂರು, ಮಂಡ್ಯಜಿಲ್ಲೆಗಳಲ್ಲಿದೆ. ಮಲೆನಾಡು ಅರೆಮಲೆನಾಡು ಭಾಗಗಳಲ್ಲಿ ದೊರೆತಿವೆ. ಉತ್ತರ ಕರ್ನಾಟಕದ ನೆಲೆಗಳು ದಕ್ಷಿಣ ಕರ್ನಾಟಕದ ನೆಲೆಗಳಿಗಿಂತ ಹೆಚ್ಚು ಆಶಾದಾಯಕವಾಗಿವೆ.

ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿ ಕಲ್ಗೋರಿಗಳು ಮತ್ತು ವಸತಿ ನೆಲೆಗಳು ಕಂಡುಬಂದಿವೆ. ಹಲವು ನೆಲೆಗಳ ಉತ್ಖನನವೂ ನಡೆದಿವೆ. ಬೆಂಗಳೂರು ಜಿಲ್ಲೆಯ ದೊಡ್ಡ ಬಳ್ಳಾಪುರ ತಾಲೂಕಿನ ರಾಜಘಟ್ಟ, ಕೊಡುಗು ಜಿಲ್ಲೆಯ ಹೆಗ್ಗಡೆಹಳ್ಳಿ, ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲೂಕಿನ ನಿಡಗಟ್ಟ, ಶಿವಮೊಗ್ಗ ಜಿಲ್ಲೆಯ ನಿಲಸಗಲ್, ಸೊಳೆಬೈಲುನಲ್ಲಿ ಅವಶೇಷಗಳು ದೊರೆತಿವೆ.

ಹಾವೇರಿಜಿಲ್ಲೆಯ ಭೈರವನಪಾದ, ಚೌಡಯ್ಯನ ದಾನಪುರದಲ್ಲಿ ಈ ಸಂಸ್ಕೃತಿಯ ಅವಶೇಷಗಳು ದೊರಕಿವೆ. ಕೋಲಾರ ಜಿಲ್ಲೆಯ ಗರುಡನಹಳ್ಳಿ, ಕೋಲಾರ ಹಾಗೂ ಹಾಸನ ಜಿಲ್ಲೆಯ ಉಲ್ಲೇನಹಳ್ಳಿ, ತುಮಕೂರು ಜಿಲ್ಲೆಯ ಯಲ್ಲಪ್ಪನಾಯಕನಹಳ್ಳಿ, ಕತ್ತಿರಾಜನಹಳ್ಳಿ ಈ ಸಂಸ್ಕೃತಿಯ ಕುರುಹುಗಳು ಕಂಡುಬಂದಿವೆ.[೫೮]

ಉಡುಪಿ ಜಿಲ್ಲೆಯ ಬೊಮ್ಮರಬೆಟ್ಟು, ಉತ್ತರಕನ್ನಡ ಜಿಲ್ಲೆಯ ಕಂತ್ರಾಜಿ, ಬೆಳಗಾವಿ ಜಿಲ್ಲೆಯ ಕೊಣ್ಣೂರು, ಕೊಪ್ಪಳ ಜಿಲ್ಲೆಯ ಹಿರೇಬೆಣಕಲ್ಲು, ಚಿತ್ರದುರ್ಗ ಜಿಲ್ಲೆಯ ಚಿಪ್ಪಿನಕೆರೆ, ತಮ್ಮಟಕಲ್ಲು, ನಂದನ ಹೊಸೂರು, ಬೂದಿಪುರ, ಗಂಜಿಗಟ್ಟೆ, ಜಂಪಣ್ಣನಾಯಕನ ಕೋಟೆ, ಇಂಗಳ್‌ದಾಳ್, ಕೂನಬೇವು, ಚಿಕ್ಕಮದುರೆ, ಬಗ್ಗಲರಂಗವ್ವನಹಳ್ಳಿ, ಹಾಗೂ ಬಳ್ಳಾರಿಜಿಲ್ಲೆಯ ಭೈರನಾಯಕನಹಳ್ಳಿ,

ತಮ್ಮಲಾಪುರ, ಮಲ್ಲಾಪುರ, ರಾಜಪುರ, ಇನ್ನು ಮೊದಲಾದ ನೆಲೆಗಳು ಅನ್ವೇಷಣಾ ನೆಲೆಗಳಾಗಿವೆ. ಈ ನೆಲೆಗಳಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಗೆ ಸೇರಿದ ಕಲ್ಗೋರಿ ಹಾಗೂ ಇತರೆ ಅವಶೇಷಗಳು ದೊರೆತಿವೆ.[೫೯] ಈ ಎಲ್ಲಾ ಪ್ರದೇಶಗಳಲ್ಲಿ ಸತ್ತವರ ಜ್ಞಾಪಕಾರ್ಥವಾಗಿ ನಿರ್ಮಿಸಿದ ಶಿಲಾಸಮಾಧಿಗಳಾಗಿದ್ದು ಪ್ರಸ್ತುತ ಅಧ್ಯಯನ ಪ್ರದೇಶವಾದ ಕೂಡ್ಲಿಗಿ ತಾಲೂಕಿನಲ್ಲಿಯೂ ಸಹ ಈ ತರಹದ ನೆಲೆಗಳನ್ನು ಅಸುಂದರ, ಸುಬ್ಬರಾವ್, ಬಿ.ಲಕ್ಷ್ಮಣ್ ತೆಲಗಾವಿ, ಆರ್.ಎಂ.ಕ್ಷಡಕ್ಷರಯ್ಯ, ಹೆಚ್.ತಿಪ್ಪೇಸ್ವಾಮಿ, ಕೆ.ಪಿ.ಪೂಣಚ್ಚ, ಬಾಲಸುಬ್ರಹ್ಮಣ್ಯಂ, ವಾಸುದೇವ ಬಡಿಗೇರ್, ಸಿ.ಎಸ್.ವಾಸುದೇವನ್, ರಮೇಶನಾಯಕ, ವಿರುಪಾಕ್ಷಿ ಪೂಜಾರಹಳ್ಳಿ, ಉಲ್ಲಾನಹಳ್ಳಿ ಜಯಣ್ಣ, ಭೀಮ ಸಮುದ್ರರಂಗನಾಥ ಮೊದಲಾದವರು. ಈ ಸಂಸ್ಕೃತಿಗೆ ಸಂಬಂಧಿಸಿದ ಕುರುಹುಗಳನ್ನು ಬೆಳಕಿಗೆ ತಂದಿದ್ದಾರೆ.

ಕೂಡ್ಲಿಗಿ ತಾಲೂಕಿನ ಬೃಹತ್ ಶಿಲಾಯುಗದ ನೆಲೆಗಳು ಹಾಗೂ ಅವುಗಳು ದೊರೆತ ಪರಿಸರವನ್ನು ಈ ಕೆಳಗಿನ ಕೋಷ್ಟಕದಲ್ಲಿ ತೋರಿಸಲಾಗಿದೆ.

**ಬೃಹತ್ ಶಿಲಾಯುಗದ ನೆಲೆಗಳು**

| ಕ್ರಮ ಸಂಖ್ಯೆ | ನೆಲೆಗಳ ಹೆಸರುಗಳು | ದೊರೆತ ಅವಶೇಷಗಳು | ಅವಶೇಷಗಳು ದೊರೆತ ಪರಿಸರ |
|---|---|---|---|
| ೧ | ಹುಲಿಕುಂಟೆ | ಮಾನವಾಕೃತಿಶಿಲೆ | ತಪ್ಪಲು |
| ೨ | ಕುಮತಿ | ಮಾನವಾಕೃತಿಶಿಲೆ | ಬಯಲು |
| ೩ | ಗುಡೇಕೋಟೆ | ಕಂಡಿಕೋಣೆಗೋರಿ | ಬೆಟ್ಟ |
| ೪ | ಹುರುಳಿಯಾಳ್ | ಕಬ್ಬಿಣದಕಿಟ್ಟ ಮತ್ತು ಕುಲುಮೆ | ಬಯಲು |
| ೫ | ಅಪ್ಪಯ್ಯನಹಳ್ಳಿ | ಶಿಲಾಸಮಾಧಿ | ತಪ್ಪಲು |
| ೬ | ಮಹದೇವಪುರ | ಶಿಲಾಸಮಾಧಿ | ತಪ್ಪಲು |
| ೭ | ಮಡಕಲಕಟ್ಟೆ | ಶಿಲಾಸಮಾಧಿ | ಬಯಲು |
| ೮ | ಹಾಲಸಾಗರ | ಕೋಣೆಗೋರಿ | ಬೆಟ್ಟ |
| ೯ | ಜರಿಮಲೆ | ಹಾದಿಕೋಣೆಗೋರಿ | ಬೆಟ್ಟ |
| ೧೦ | ಅಮರದೇವರ ಗುಡ್ಡ | ಶಿಲಾಸಮಾಧಿ | ಬೆಟ್ಟ |
| ೧೧ | ತಿಮ್ಮವ್ವನಹಳ್ಳಿ | ಕಬ್ಬಿಣದಕಿಟ್ಟ ಮತ್ತು ಕುಲುಮೆ | ಬಯಲು |
| ೧೨ | ಕಲ್ಲಹಳ್ಳಿ | ಕೆಂಪು–ಕಪ್ಪು ಮಡಿಕೆಚೂರು | ಬಯಲು |
| ೧೩ | ಮಾಲಹಳ್ಳಿ | ಬಯಲು ಬಂಡೆ ಕುಡ್ಡು ಚಿತ್ರ | ಬಯಲು |
| ೧೪ | ಸುಣ್ಣಮರಡಿ | ಶಿಲಾಸಮಾಧಿ | ಬಯಲು |
| ೧೫ | ಚಕ್ಕೆಮಂಡಿ | ಕಬ್ಬಿಣದಕಿಟ್ಟ ಮತ್ತು ಕುಲುಮೆ | ಬಯಲು |
| ೧೬ | ಓಬಳಾಪುರ | ಕಬ್ಬಿಣದ ಕಿಟ್ಟ ಮತ್ತು ಕುಲುಮೆ | ತಪ್ಪಲು |
| ೧೭ | ನಡುವಲಹಳ್ಳಿ | ಶಿಲಾಸಮಾಧಿ | ಬಯಲು |

| ಪ್ರಸ್ತುತ ಅಧ್ಯಯನ ಕ್ಷೇತ್ರದಲ್ಲಿ ಈ ಹಿಂದೆಯೇ ಶೋಧಿಸಲ್ಪಟ್ಟ ಬೃಹತ್ ಶಿಲಾಯುಗದ ನೆಲೆಗಳು | |
|---|---|
| ಕ್ರಸಂ | ನೆಲೆಗಳಹೆಸರು |
| ೧ | ಕುಮತಿ |
| ೨ | ಹುಲಿಕುಂಟೆ |
| ೩ | ಜರಿಮಲೆ |
| ೪ | ಗುಡೇಕೋಟೆ |
| ೫ | ಹಾಲಸಾಗರ |
| ೬ | ಸುಣ್ಣಮರಡಿ |
| ೭ | ಮಹದೇವ ಪುರ |
| ೮ | ಅಮರದೇವರಗುಡ್ಡ |
| ೯ | ಕಲ್ಲಹಳ್ಳಿ |
| ೧೦ | ಹುರುಳಿಯಾಳ್ |
| ೧೧ | ತಿಮ್ಮಲಾಪುರ |
| ೧೨ | ತಿಮ್ಮವ್ವನಹಳ್ಳಿ |

| ಪ್ರಸ್ತುತ ಅಧ್ಯಯನ ಕ್ಷೇತ್ರಕಾರ್ಯದಲ್ಲಿ ಗುರುತಿಸಿದ ಈ ಸಂಸ್ಕೃತಿಯ ನೆಲೆಗಳು | |
|---|---|
| ಕ್ರ.ಸಂ | ನೆಲೆಗಳ ಹೆಸರು |
| ೧ | ಮಾಲಹಳ್ಳಿ |
| ೨ | ಮಡಕಲ ಕಟ್ಟೆ |
| ೩ | ನಡುವಲಹಳ್ಳಿ |
| ೪ | ಓಬಳಾಪುರ |
| ೫ | ಚಕ್ಕೆಮಂಡಿ |

**ಹುಲಿಕುಂಟೆ**

ಈ ನೆಲೆಯು ತಾಲೂಕು ಕೇಂದ್ರದಿಂದ ಸುಮಾರು ೩೧.ಕಿ.ಮೀ ದೂರದಲ್ಲಿದೆ. ಈ ಸ್ಥಳವು ಕುರುಚಲು ಕಾಡು, ಬೆಟ್ಟಗಳಿಂದ ಕೂಡಿದ್ದು, ಈ ನೆಲೆಯ ಸಮೀಪದಲ್ಲಿ ಗುಡೇಕೋಟೆ ಬೆಟ್ಟಸಾಲು ಹಾದು ಹೋಗಿರುವುದು ಗೋಚರಿಸುತ್ತದೆ. ಈ ಗ್ರಾಮ ಪರಿಸರದ ಬೆಟ್ಟದ ಬಳಿ ಕೆರೆ ಹಳ್ಳಗಳಿದ್ದು ಪ್ರಾಚೀನ ಮಾನವನು ಇಲ್ಲಿ ನೆಲೆಯೂರಲು ಯೋಗ್ಯವಾದ ಪ್ರದೇಶವಾಗಿತ್ತು ಎಂಬುದನ್ನು ತಿಳಿಯಬಹುದು. ಈ ನೆಲೆಯನ್ನು ೧೯೯೯ರಲ್ಲಿ ಕನ್ನಡ ವಿಶ್ವ ವಿದ್ಯಾಲಯದ ಪುರಾತತ್ವ

ಅಧ್ಯಯನ ವಿಭಾಗದ ಸಂಶೋಧನಾ ವಿದ್ಯಾರ್ಥಿಯಾದ ಹೆಚ್. ತಿಪ್ಪೇಸ್ವಾಮಿ ತನ್ನ ಗೆಳೆಯನಾದ ಭೀಮ ಸಮುದ್ರದ ರಂಗನಾಥ ಮತ್ತು ಡಿಸ್ಕವರಿ ಟ್ರೂಪ್ ಇತರೆ ಸದಸ್ಯರು ಗ್ರಾಮಾಂತರ ಕ್ಷೇತ್ರಕಾರ್ಯ ಸಮಯದಲ್ಲಿ ಮೊಟ್ಟ ಮೊದಲ ಬಾರಿಗೆ ಶಿಲಾ ವೃತ್ತದೊಳಗಿರುವ ಮೂರು ಮಾನವಾಕೃತಿಯ ಏಕಶಿಲಾ ಸಮುಚ್ಚಯಗಳನ್ನು ಪತ್ತೆಹಚ್ಚಿದ್ದರು.[೬೦]

ಈ ನೆಲೆಯ ವಾಯುವ್ಯ ದಿಕ್ಕಿಗೆ ಸುಮಾರು ೨.ಕಿ.ಮೀ ದೂರದಲ್ಲಿ ಹರಿಜನ ಬೋರಕ್ಕ ಎಂಬುವರ ಜಮೀನಿನಲ್ಲಿ ಈ ಮೂರು ಮಾನವಾಕೃತಿಯ ಶಿಲೆಗಳಿವೆ. ಮತ್ತು ಮಡಿಕೆಚೂರು, ಕಬ್ಬಿಣ ತಯಾರಿಸುವ ಕೆಲ ಅವಶೇಷಗಳು ದೊರಕಿವೆ. ಇವುಗಳಲ್ಲಿ ಒಂದು ಮಾತ್ರ ಸುಸ್ಥಿತಿಯಲ್ಲಿದ್ದು ಮತ್ತೊಂದರ ಅರ್ಧಭಾಗ ಭೂಮಿಯಲ್ಲಿ ಅಡಗಿದೆ. ಇನ್ನೊಂದರ ಕೆಲ ಅವಶೇಷಗಳು ಮಾತ್ರ ಲಭ್ಯವಾಗಿದ್ದು ಇವುಗಳನ್ನು ಗ್ರಾನೈಟ್ ಶಿಲೆಯ ಫಲಕಗಳಿಂದ ನಿರ್ಮಿಸಲಾಗಿದೆ. ಇವುಗಳ ಹೆಚ್ಚಿನ ವಿವರ ಮುಂದಿನ ಅಧ್ಯಾಯದಲ್ಲಿ ತಿಳಿಸಲಾಗುವುದು.

**ಕುಮತಿ**

ಕುಮತಿ ಗ್ರಾಮವು ಕೂಡ್ಲಿಗಿ ತಾಲೂಕಿನಿಂದ ೪೦.ಕಿ.ಮೀ ದೂರದಲ್ಲಿರುವ ಚಿಕ್ಕಗ್ರಾಮ. ಈ ಗ್ರಾಮವು ಬಯಲು ಪ್ರದೇಶವಾಗಿದ್ದು, ಗ್ರಾಮದ ಕೆರೆಯ ಸಮೀಪದಲ್ಲಿ ಕೆ.ಎಂ. ತಿಪ್ಪೇರುದ್ರಯ್ಯನವರ ಜಮೀನಿನಲ್ಲಿ ಏಳುಮಾನವಕೃತಿಯ ಏಕಶಿಲಾ ಸಮುಚ್ಛಯಗಳು ದೊರಕಿವೆ. ಆದರೆ ಅವುಗಳಲ್ಲಿ ಎರಡು ಮಾತ್ರ ಸುಸ್ಥಿತಿಯಲ್ಲಿದ್ದು ಇನ್ನುಳಿದ ಐದು ಸಮುಚ್ಛಯಗಳು ಭಗ್ನಗೊಂಡಿವೆ. ಇತ್ತೀಚೆಗೆ ನಿಧಿಗಳ್ಳರ ಹಾವಳಿಯಿಂದ ಈ ನೆಲೆಯು ಸಾಕಷ್ಟು ಹಾಳಾಗುತ್ತಿದೆ.

೧೯೯೬ರಲ್ಲಿ ಪುರಾತತ್ವ ಇಲಾಖೆಯ ಬೆಂಗಳೂರು ಶಾಖೆಯವರು ಕೆ.ವಿ ಪೂಣಚ್ಚ ಇವರ ನೇತೃತ್ವದಲ್ಲಿ ಹಮ್ಮಿಕೊಂಡಿದ್ದ ಗ್ರಾಮಾಂತರ ಸಮೀಕ್ಷಾ ಕಾರ್ಯದಲ್ಲಿ ಈ ನೆಲೆಯನ್ನು ಅನ್ವೇಷಿಸಿ ವರದಿಮಾಡಿದರು.[೬೧] ಮತ್ತು ಈ ನೆಲೆಯ ೧.ಕಿ.ಮೀ ಅಂತರದಲ್ಲಿ ಕಂಡಿಕೋಣೆ ಸಮಾಧಿಯು ಸಹ ದೊರೆತಿದೆ. ಇವುಗಳ ಹೆಚ್ಚಿನ ವಿವರವನ್ನು ಅಧ್ಯಾಯ ನಾಲ್ಕರಲ್ಲಿ ತಿಳಿಸಲಾಗುವುದು.

**ಗುಡೇಕೋಟೆ**

ತಾಲೂಕು ಕೇಂದ್ರವಾದ ಕೂಡ್ಲಿಗಿಯಿಂದ ಈ ನೆಲೆಯು ೩೦.ಕಿ.ಮೀ ದೂರದಲ್ಲಿದೆ. ಈ ಸಂಸ್ಕೃತಿಗೆ ಸೇರಿದ ವಿವಿಧ ಮಡಿಕೆಗಳು ಮತ್ತು ವಿವಿಧ ಮಾದರಿಯ ಶಿಲಾ ಸಮಾಧಿಗಳನ್ನು ಪತ್ತೆಹಚ್ಚಲಾಗಿದೆ. ಗುಡೇಕೋಟೆಯ ವಾಯುವ್ಯ ದಿಕ್ಕಿನಲ್ಲಿ ಬೆಟ್ಟ ಪ್ರದೇಶದಲ್ಲಿ ಕಂಡಿ ಕೋಣೆಗೋರಿ ಕಂಡು ಬಂದಿದ್ದು ಇಂದಿಗೂ ಸುಸ್ಥಿತಿಯಲ್ಲಿದೆ. ಈ ಕಂಡಿಕೋಣೆಯು ಗ್ರಾನೈಟ್ ಶಿಲೆಯಿಂದ ನಿರ್ಮಿಸಲಾಗಿದೆ. ಹಾಗೂ ಇದೇ ನೆಲೆಯ ಕೋಟೆಗೆ ಹೋಗುವ ದಾರಿಯಲ್ಲಿ ನೈಸರ್ಗಿಕವಾಗಿರುವ ಕಲ್ಮನೆಯಲ್ಲಿ ಕಂದು ಮತ್ತು ಬಿಳಿವರ್ಣದ ಚಿತ್ರಗಳಿದ್ದು ಅವುಗಳಲ್ಲಿ ಮಾನವರು ಬೇಟೆಯಾಡುತ್ತಿರುವ ಮತ್ತು ಕುದುರೆ ಸವಾರಿ ಮಾಡುತ್ತಿರುವ ಚಿತ್ರಗಳು, ಎಮ್ಮೆಯ ಚಿತ್ರವನ್ನು ಚಿತ್ರಿಸಿರುವುದನ್ನು

ಸಂಶೋಧಕರು ಗುರುತಿಸಿದ್ದಾರೆ. ಹಾಗೂ ದಕ್ಷಿಣ ಭಾಗದಲ್ಲಿ ಸರ್ವೋದಯ ಶಾಲೆಯ ಹತ್ತಿರ ಪಂಚಲಿಂಗೇಶ್ವರ ಗುಹಾಂತರ ದೇವಾಲಯಕ್ಕೆ ಹೋಗುವ ಹಾದಿಯಲ್ಲಿ ಈ ಸಂಸ್ಕೃತಿಯ ಕಲ್ಗೋರಿಯನ್ನು, ಇದೇ ಗವಿಯ ಬಂಡೆಯ ಕೆಳ ಮುಖದಲ್ಲಿ ಬಿಳಿ ವರ್ಣದಲ್ಲಿ ಮಾನವ ಚಿತ್ರಗಳನ್ನು ಶೋಧಿಸಲಾಗಿದೆ.[೬೨]

**ಹುರುಳಿಯಾಳ್**

ಹುರುಳಿಯಾಳ್ ಗ್ರಾಮದಿಂದ ಮೀನಕರೆಗೆ ಹೋಗುವ ಮಾರ್ಗದಲ್ಲಿ ಒಂದು ಕಿ.ಮೀ ಸಾಗಿದರೆ ಎಡಗಡೆ ರಸ್ತೆ ಪಕ್ಕದ ಜಮೀನಿನಲ್ಲಿ ಸುಮಾರು ೧೦ಲೋಡ್ ಕಬ್ಬಿಣದ ಕಿಟ್ಟದರಾಶಿ ಇದೆ.[೬೩] ಇದು ಕೂಡ್ಲಿಗಿ ಪಟ್ಟಣದಿಂದ ರಾಷ್ಟ್ರೀಯ ಹೆದ್ದಾರಿ ೧೩ರಲ್ಲಿ ಸಂಚರಿಸಿ ಚಿಕ್ಕ ಜೋಗಿಹಳ್ಳಿ ಕ್ರಾಸ್ ಮೂಲಕ ಹುರುಳಿಯಾಳ್ ದಾಟಿ ಬಳ್ಳಾರಿ ರಸ್ತೆಯಲ್ಲಿ ಎರಡು ಕಿ.ಮೀ ಸಾಗಿದರೆ ಈ ಪ್ರದೇಶ ಗೋಚರಿಸುತ್ತದೆ.

ಈ ನೆಲೆಯಲ್ಲಿ ಪುರಾತನ ಕುಲುಮೆ ಅವಶೇಷಗಳು ಕಂಡುಬಂದಿದ್ದು ಅವುಗಳನ್ನು ಕಬ್ಬಿಣದ ಆಯುದೋಪಕರಣ ತಯಾರಿಸಲು ಇಲ್ಲೊಂದು ಘಟಕವನ್ನು ತರೆಯಲಾಗಿತ್ತು ಎಂಬುದು ಅಧ್ಯಯನದಿಂದ ತಿಳಿದುಬರುತ್ತದೆ.

ಕಬ್ಬಿಣವನ್ನು ತಯಾರಿಸುವಾಗ ಅಶುದ್ಧವಾಗಿ ಹೊರಬಂದಿರುವ ದ್ರವರೂಪದ ಬೇಡವಾದ ಅಂಶವೇ ಕಿಟ್ಟವಾಗಿ ಪರಿಣಮಿಸಿದೆ. ಈ ಕಿಟ್ಟವು ಸುಮಾರು ಒಂದು ಎಕರೆ ಪ್ರದೇಶದಲ್ಲಿ ಹರಡಿಕೊಂಡಿದ್ದು ಇದರ ಕಾಲ ನಿರ್ಣಯದ ಬಗ್ಗೆ ವೈಜ್ಞಾನಿಕ ವಿಶ್ಲೇಷಣೆ ಆಗಬೇಕಾಗಿದೆ. ಆಗ ಮಾತ್ರ ಇವುಗಳ ಮೂಲವನ್ನು ಸ್ಪಷ್ಟವಾಗಿ ತಿಳಿಯಬಹುದು.

**ಅಪ್ಪಯ್ಯನಹಳ್ಳಿ**

ಕೂಡ್ಲಿಗಿಯಿಂದ ಸುಮಾರು ೩೯.ಕಿ.ಮೀ ದೂರದಲ್ಲಿ ಈ ನೆಲೆ ಕಂಡುಬರುತ್ತದೆ. ಈ ನೆಲೆಯು ನೈಸರ್ಗಿಕ ಗ್ರಾನೈಟ್ ಶಿಲಾ ಬೆಟ್ಟಗಳಿಂದ ತೆಳುವಾಗಿ ಹರಿಯುವ ನೀರಿನಿಂದ ಮತ್ತು ಗಿಡ ಮರಗಳಿಂದ ಕೂಡಿರುವ ಪ್ರದೇಶವಾಗಿದೆ. ಇಲ್ಲಿ ಶಿಲಾ ತಾಮ್ರಯುಗ ಸಂಸ್ಕೃತಿಗೆ ಸೇರಿದ ವರ್ಣಚಿತ್ರಗಳು ಇಲ್ಲಿನ ಗವಿಗಳಲ್ಲಿ ಕಂಡುಬಂದಿದ್ದು[೬೪] ಇದೊಂದು ಪ್ರಾಗೈತಿಹಾಸಿಕ ನೆಲೆ ಎಂದೆನಿಸಿದೆ. ಅಲ್ಲದೆ ಈ ಪ್ರದೇಶದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದ ಶಿಲಾಗೋರಿ ಮತ್ತು ವರ್ಣಚಿತ್ರಗಳು ದೊರೆತಿರುವುದರಿಂದ ಈ ನೆಲೆಯು ಮಹತ್ವ ಪೂರ್ಣವೆನ್ನಿಸಿದೆ.

**ಮಹದೇವಪುರ**

ಕೂಡ್ಲಿಗಿ ತಾಲೂಕಿನಲ್ಲಿ ಕಂಡು ಬರುವ ಮತ್ತೊಂದು ಬೃಹತ್ ಶಿಲಾಯುಗದ ನೆಲೆಯಾದ ಮಹದೇವಪುರವು ಗುಡೇಕೋಟೆ ಸಮೀಪದಲ್ಲಿ ಕಂಡುಬರುತ್ತದೆ. ನೈಸರ್ಗಿಕವಾದ ಬೆಟ್ಟಗುಡ್ಡಗಳಿಂದ

ಗಿಡಮರ, ಬಳ್ಳಿ, ಹಳ್ಳಕೊಳ್ಳಗಳಿಂದ ಕೂಡಿರುವ ಪ್ರದೇಶವಾಗಿದೆ. ಈ ನೆಲೆಯಲ್ಲಿ ಕೈರನ್‌ಮಾದರಿ (ಸ್ವಸ್ತಿಕ್)ಯ ಚಕ್ಕೆ ಕಲ್ಲುಗಳಿಂದ ತುಂಬಿದ ಕಲ್ಲುವೃತ್ತಗಳನ್ನು ವಿದ್ವಾಂಸರು ಪತ್ತೆ ಹಚ್ಚಿದ್ದಾರೆ.[೬೫] ಈ ಪ್ರದೇಶ ಬೆಟ್ಟದ ಸಮೀಪದಲ್ಲಿರುವುದರಿಂದ ಆದಿಮ ಸಮಾಜದ ಜನರು ಇಲ್ಲಿ ವಾಸವಾಗಿದ್ದರು ಎಂಬುದನ್ನು ದೊರೆತಿರುವ ಶಿಲಾಗೋರಿಯಿಂದ ತಿಳಿಯಬಹುದು. ಈ ಶಿಲಾಗೋರಿಯನ್ನು ಸ್ಥಳಿಯವಾಗಿ ದೊರೆಯುವ ಗ್ರಾನೈಟ್ ಶಿಲೆಗಳನ್ನು ಬಳಸಿ ನಿರ್ಮಿಸಲಾಗಿದೆ.

### ಮಡಕಲಕಟ್ಟೆ

ಕೂಡ್ಲಿಗಿ ತಾಲೂಕಿನ ಚಿಕ್ಕ ಜೋಗಿಹಳ್ಳಿ ಸಮೀಪದಲ್ಲಿರುವ ಮಡಕಲಕಟ್ಟೆ ಎಂಬ ಗ್ರಾಮದಲ್ಲಿ ಬೃಹತ್ ಶಿಲಾಯುಗದ ಎರಡು ಕಲ್ಗೋರಿಗಳು ಕಂಡುಬಂದಿದ್ದು, ಇವು ಮಡಕಲಕಟ್ಟೆ ಗ್ರಾಮದಿಂದ ಹುರುಳಿಯಾಳ್‌ಗೆ ಹೋಗುವ ದಾರಿಯ ಪಕ್ಕದಲ್ಲಿವೆ. ಚಕ್ಕೆ ಕಲ್ಲುಗಳಿಂದ ತುಂಬಿದ ಕಲ್ಲುವೃತ್ತ ಮಾದರಿಯ ಶಿಲಾಗೋರಿಗಳಾಗಿದ್ದು, ಇವುಗಳು ಬಯಲು ಪ್ರದೇಶಗಳಲ್ಲಿ ಕಂಡುಬಂದಿವೆ, ಇವುಗಳ ಸಮೀಪದಲ್ಲಿ ದೊಡ್ಡ ದೊಡ್ಡ ಗುಂಡು ಬಂಡೆಗಲ್ಲುಗಳಿವೆ. ಮತ್ತೊಂದು ಶಿಲಾಗೋರಿಯು ಹಳ್ಳದ ಬಯಲಿನಲ್ಲಿದೆ. ಇದು ತುಂಬಾ ಹಾಳಾಗಿದ್ದು ಚಪ್ಪಡಿಕಲ್ಲು ಚೆಲ್ಲಾಪಿಲ್ಲಿಯಾಗಿ ಬಿದ್ದಿವೆ. ಆದಕಾರಣ ಇದರ ಲಕ್ಷಣವನ್ನು ಗುರುತಿಸುವುದು ಕಷ್ಟದಾಯಕವಾಗಿದೆ.

### ಹಾಲಸಾಗರ

ಕೂಡ್ಲಿಗಿ ತಾಲೂಕು ಕೇಂದ್ರದಿಂದ ಪೂರ್ವಕ್ಕೆ ೩೯.ಕಿ.ಮೀ ದೂರದಲ್ಲಿದೆ. ಈ ನೆಲೆಯು ಗ್ರಾನೈಟ್ ಶಿಲೆಯ ಬೆಟ್ಟಗಳಿಂದ ಕೂಡಿರುವ ಪ್ರದೇಶವಾಗಿದ್ದು ಇಲ್ಲಿ ಬೃಹತ್‌ಶಿಲಾಯುಗ ಸಂಸ್ಕೃತಿಗೆ ಸೇರಿದ ಶಿಲಾಸಮಾಧಿಗಳನ್ನು ಸಂಶೋಧಕರು ಪತ್ತೆಹಚ್ಚಿದ್ದಾರೆ.[೬೬] ಇಲ್ಲಿ ಹಾದಿಕೋಣೆಗೋರಿಗಳು ವಿಶೇಷವಾಗಿ ದೊರೆತಿರುವುದರಿಂದ ಈ ನೆಲೆಯು ಪ್ರಾಗೈತಿಹಾಸಿಕ ಮಹತ್ವವನ್ನು ಪಡೆದಿದೆ. ಮತ್ತು ಇಲ್ಲಿನ ಶಿಲಾಸಮಾಧಿಗಳನ್ನು ಹಿರಿಯರು/ಸ್ಥಳೀಯರು ಮೊರೆಯರ ಮನೆಗಳು ಎಂದು ಕರೆಯುತ್ತಾರೆ.

### ಜರಿಮಲೆ

ಜರಿಮಲೆ ಗ್ರಾಮವು ಕೂಡ್ಲಿಗಿ ತಾಲೂಕಿನಿಂದ ೧೫ಕಿ.ಮೀ ದೂರದಲ್ಲಿದೆ. ಮತ್ತು ಜಿಲ್ಲಾ ಕೇಂದ್ರದಿಂದ ೬೯.ಕಿ.ಮೀ ದೂರದಲ್ಲಿರುವ ಈ ನೆಲೆಯು ಸುತ್ತಲೂ ಬೆಟ್ಟಗಳಿಂದ, ಕಲ್ಲು ಬಂಡೆಗಳಿಂದ, ನೈಸರ್ಗಿಕ ಗವಿಗಳಿಂದ ಸದಾ ತೆಳುವಾಗಿ ಹರಿಯುವ ನೀರಿನಿಂದ ಕೂಡಿದೆ. ಈ ನೆಲೆಯಲ್ಲಿ ಮತ್ತು ಇಲ್ಲಿ ಕಪ್ಪು ಕೆಂಪು ವರ್ಣದ ಮಡಕೆ ಚೂರುಗಳು ವಿವಿಧ ಮಾದರಿಯ ಶಿಲಾಸಮಾಧಿಗಳನ್ನು ಸಂಶೋಧಕರು ಪರಿಶೋಧಿಸಿದ್ದಾರೆ.[೬೭] ಅವುಗಳಲ್ಲಿ ಹಾದಿಕೋಣೆಗೋರಿಗಳು ಮತ್ತು ಕಂಡಿಕೋಣೆಗೋರಿಗಳು ಪ್ರಮುಖವಾಗಿವೆ. ಈ ಕಲ್ಗೋರಿಗಳನ್ನು ಇಲ್ಲಿ ಸ್ಥಳೀಯವಾಗಿ ದೊರೆಯುವ ಗ್ರಾನೈಟ್ ಶಿಲೆಗಳಿಂದ ನಿರ್ಮಿಸಲಾಗಿದೆ. ಹಾಗೂ ಈ ಕಲ್ಗೋರಿಗಳನ್ನು ಸ್ಥಳೀಯವಾಗಿ

ಜನರು ಮೊರೆಯರ ಮನೆಗಳೆಂದು ಕರೆಯಲಾಗುತ್ತದೆ. ಹಾಗಾಗಿ ಈ ಪ್ರದೇಶ ಪ್ರಾಗೈತಿಹಾಸಿಕ ಮಹತ್ವವನ್ನು ಪಡೆದಿದೆ.

**ಅಮರದೇವರಗುಡ್ಡ**

ಈ ನೆಲೆಯು ಇಂದು ಕೂಡ್ಲಿಗಿ ಪಟ್ಟಣದ ೧ನೇ ವಾರ್ಡ ಆಗಿ ಪರಿವರ್ತನೆಗೊಂಡಿದೆ. ಊರಿನ ಸಮೀಪದಲ್ಲಿರುವ ಬೆಟ್ಟವನ್ನು ಅಮರ ದೇವರ ಗುಡ್ಡ ಎಂದು ಕರೆಯಲಾಗುತ್ತದೆ. ಈ ಬೆಟ್ಟವು ಬೃಹತ್ ಗಾತ್ರದ ಬಂಡೆಗಳಿಂದ, ಅಲ್ಪ ಪ್ರಮಾಣ ಮರಗಿಡ ಗಳಿಂದ ಕೂಡಿರುವ ಈ ಪ್ರದೇಶದಲ್ಲಿ ನೈಸರ್ಗಿಕವಾಗಿ ನೀರಿನ ದೋಣಿ ಇದೆ. ಹಾಗೂ ಗ್ರಾನೈಟ್ ಶಿಲೆಗಳಿಂದ ನಿರ್ಮಿಸಿದ ಶಿಲಾಸಮಾಧಿಯನ್ನು ಸಂಶೋಧಕರು ಗುರುತಿಸಿದ್ದಾರೆ.[೧೮] ಇದರಿಂದ ಈ ನೆಲೆಯಲ್ಲಿ ಆದಿ ಮಾನವ ಪ್ರಾಗೈತಿಹಾಸಿಕ ಕಾಲದಿಂದಲೂ ವಾಸವಾಗಿದ್ದನೆಂದು ತಿಳಿದುಬರುತ್ತದೆ.

**ತಿಮ್ಮವ್ವನಹಳ್ಳಿ (ತಿಮ್ಮನಹಳ್ಳಿ)**

ಕೂಡ್ಲಿಗಿ ತಾಲೂಕು ವ್ಯಾಪ್ತಿಯಲ್ಲಿರುವ ಈ ಗ್ರಾಮದಲ್ಲಿ ಪುರಾತನ ಕಬ್ಬಿಣದ ಕುಲುಮೆಗಳು ಮತ್ತು ಕಬ್ಬಿಣದ ಕಿಟ್ಟ ಅವಶೇಷಗಳನ್ನು ಭೀಮಸಮುದ್ರ ರಂಗನಾಥ ಮತ್ತು ಡಾ.ಎಚ್.ತಿಪ್ಪೇಸ್ವಾಮಿಯವರು ಬೆಳಕಿಗೆ ತಂದಿದ್ದಾರೆ.[೧೯] ಈ ಗ್ರಾಮ ಪ್ರದೇಶವು ಬಯಲು ನಾಡಾಗಿದ್ದು, ಈ ಗ್ರಾಮದ ಪಕ್ಕದ ಜಮೀನೊಂದರಲ್ಲಿ ಸುಮಾರು ೧೦ಲೋಡ್ ಕಬ್ಬಿಣದ ಕಿಟ್ಟ ರಾಶಿ ಇದ್ದು ಈ ನೆಲೆಯ ಸಮೀಪದಲ್ಲಿ ಶಿಲಾಯುಗ ಕಾಲದ ಮಾನವಾಕೃತಿಕಲ್ಲುಗಳು ಕುಮತಿ ಗ್ರಾಮದಲ್ಲಿ ದೊರೆತಿರುವುದರಿಂದ ಈ ಪ್ರದೇಶದಲ್ಲಿ ಬೃಹತ್ ಶಿಲಾಯುಗದ ಜನರು ಇಲ್ಲಿ ಕಬ್ಬಿಣದ ತಯಾರಕ ಘಟಕವನ್ನು ತರೆದಿದ್ದರು ಎಂಬುದನ್ನು ಊಹಿಸಬಹುದಾಗಿದೆ.

**ಕಲ್ಲಹಳ್ಳಿ**

ಕೂಡ್ಲಿಗಿ ತಾಲೂಕು ಕೇಂದ್ರದಿಂದ ೪೮.ಕಿ.ಮೀ ದೂರದಲ್ಲಿರುವ ಈ ನೆಲೆಯಲ್ಲಿ (ತಿಪ್ಪೇಹಳ್ಳಿಗೆ ಹೋಗುವ ದಾರಿಯ ಹಾಳೂರಿನಲ್ಲಿ) ನೂತನ ಶಿಲಾಯುಗ, ಶಿಲಾ-ತಾಮ್ರಯುಗ ಬೃಹತ್ ಶಿಲಾ ಸಂಸ್ಕೃತಿಯ ನೆಲೆಯನ್ನು ಮತ್ತು ಇದೇ ಕಾಲದ ಉಪಕರಣ ಹಾಗೂ ಕಪ್ಪು-ಕೆಂಪು ವರ್ಣದ ಮಡಿಕೆ ಭಾಗಗಳನ್ನು ಮತ್ತು ವರ್ಣ ಚಿತ್ರಗಳನ್ನು ವಿದ್ವಾಂಸರು ಶೋಧಿಸಿದ್ದಾರೆ.[೨೦] ಹಾಗೂ ಈ ನೆಲೆಯು ಚಿನ್ನಹಗರಿ ನದಿ ದಂಡೆಯಲ್ಲಿರುವುದರಿಂದ ಇಲ್ಲಿಯೇ ಹಾಳಾಗಿರುವ ಬೂದಿದಿಬ್ಬವೊಂದನ್ನು ಹಾಗೂ ಆದಿ ಇತಿಹಾಸಕಾಲಕ್ಕೆ ಸೇರಿದ ಮಡಿಕೆ ಚೂರುಗಳು ಸಾಕಷ್ಟು ಪ್ರಮಾಣದಲ್ಲಿರುವುದನ್ನು ಪತ್ತೆಹಚ್ಚಲಾಗಿದ್ದು. ಇದರಿಂದಾಗಿ ಈ ನೆಲೆಯು ಪ್ರಾಗೈತಿಹಾಸಿಕ ಮಹತ್ವವನ್ನು ಪಡೆದಿದೆ.

**ಮಾಲಹಳ್ಳಿ**

ಕೂಡ್ಲಿಗಿ ತಾಲೂಕು ಕೇಂದ್ರದಿಂದ ಸುಮಾರು ೪೫ ಕಿ.ಮೀ ದೂರದಲ್ಲಿರುವ ಈ ನೆಲೆಯು ಬಯಲು ಪ್ರದೇಶವಾಗಿದ್ದು, ಇಲ್ಲಿನ ಕೆರೆಯ ದಂಡೆಯಲ್ಲಿರುವ ದವಳಪ್ಪನ ಗುಂಡು ಎಂದು

ಸ್ಥಳೀಯವಾಗಿ ಕರೆಯುವ ಎತ್ತರದ ಗುಂಡುವಿನಲ್ಲಿ ಕುಟ್ಟಿ ರಚಿಸಿದ ಜಿಂಕೆ ಮತ್ತು ಹಾವಿನ ಚಿತ್ರಗಳು ಕಂಡು ಬಂದಿವೆ. ಹಾಗೂ ಇದೇ ಬಂಡೆಯ ಪಕ್ಕದಲ್ಲಿ ಗುಂಡುವಿನ ತಿರುವುಗುಳಿಗಳು (ಕ್ಯೂಪಲ್ಸ್‌ಗಳು) ಗೋಚರಿಸುವುದರಿಂದ ಈ ಪ್ರದೇಶವು ಬೃಹತ್ ಶಿಲಾಯುಗದ ನೆಲೆ ಎಂಬುದನ್ನು ಖಚಿತವಾಗಿ ಗುರುತಿಸಬಹುದಾಗಿದೆ. ಹಾಗೂ ಈ ಸಂಸ್ಕೃತಿಗೆ ಸೇರಿದ ಮಡಿಕೆ ಚೂರುಗಳು ದೊರೆತಿವೆ.

ಈ ನೆಲೆಯನ್ನು ಸ್ಥಳೀಯವಾಗಿ ದವಳಪ್ಪನ ಬಂಡೆ ಎಂದು ಕರೆಯುವುದರಿಂದ "ದವಳಪ್ಪ" ಎನ್ನುವ ವ್ಯಕ್ತಿ ಬೃಹತ್‌ಶಿಲಾಯುಗದ ಕಾಲದಲ್ಲಿ ಪ್ರಸಿದ್ಧಿಯನ್ನು ಪಡೆದ ವ್ಯಕ್ತಿಯಾಗಿರಬೇಕು. ಹಾಗೂ ಈ ನೆಲೆಯ ಸಮೀಪದಲ್ಲಿಯೇ ಕಲ್ಲಹಳ್ಳಿ, ಹುರುಳಿಯಾಳ್, ತಿಮ್ಮವ್ವನಹಳ್ಳಿ, ಜುಮ್ಮೋಬನಹಳ್ಳಿ, ಹುಲಿಕುಂಟೆ, ಕುಮತಿ, ನೆಲೆಗಳು ಕಂಡುಬರುವುದರಿಂದ ಈ ಪ್ರದೇಶವು ಸಹ ಪ್ರಾಗೈತಿಹಾಸಿಕ ಮಹತ್ವವನ್ನು ಪಡೆದುಕೊಂಡಿದೆ.

**ಸುಣ್ಣಮರಡಿ**

ಕೂಡ್ಲಿಗಿ ತಾಲೂಕು ಕೇಂದ್ರದಿಂದ ೪೭ ಕಿ.ಮೀ ದೂರದಲ್ಲಿರುವ ಈ ನೆಲೆಯು ಹುಲಿಕೆರೆಯಿಂದ ಪಶ್ಚಿಮಕ್ಕೆ ಚಿಕ್ಕಕುಂಬಳ ಗುಂಟೆಯ ಮಾರ್ಗದ ಮದ್ಯದಲ್ಲಿದೆ. ಇಂದು ಹಾಳೂರಾಗಿರುವ ಈ ನೆಲೆಯು ಬಯಲು ಪ್ರದೇಶವಾಗಿದ್ದು ಕುರುಚಲು ಗಿಡಗಳಿಂದ ಮಳೆಗಾಲದಲ್ಲಿ ತುಂಬಿ ಹರಿಯುವ ಹಳ್ಳ ಕುಂಟೆಗಳಿಂದ ಕೂಡಿದೆ. ಈ ನೆಲೆಯಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಗೆ ಸೇರಿದ ಶಿಲಾಗೋರಿ ಮತ್ತು ಆ ಕಾಲದ ಕಪ್ಪು-ಕೆಂಪು ವರ್ಣದ ಮಡಿಕೆಯ ಚೂರುಗಳನ್ನು ಸಂಶೋಧಕರು ಪರಿಶೋಧಿಸಿದ್ದಾರೆ.[೨೧] ಇದರಿಂದ ಈ ನೆಲೆ ಪ್ರಾಗೈತಿಹಾಸಿಕ ಮಹತ್ವವನ್ನು ಪಡೆದಿದೆ.



**ಚಿಕ್ಕೆ ಮಂಡಿ (ಚಿಕ್ಕೆಬಂಡೆ)**

ಕೂಡ್ಲಿಗಿ ತಾಲೂಕು ಕೇಂದ್ರದಿಂದ ಸುಮಾರು ೩೭.ಕಿ.ಮೀ ದೂರದಲ್ಲಿ ಗುಡೇ ಕೋಟೆ ಮೊಳಕಾಲ್ಮೂರು ರಸ್ತೆಯ ಹೊಸಹಟ್ಟಿಯ ಸಮೀಪ ಎತ್ತರಕ್ಕೆ ಕಾಣುವ ಏಕಶಿಲೆಯಿದೆ. ಈ ನೆಲೆಯನ್ನು ಚಿಕ್ಕಬಂಡೆ ಎಂದು ಕರೆಯುತ್ತಾರೆ. ಧಾರ್ಮಿಕ ಮಹಾಪುರುಷನೊಬ್ಬ ಇಲ್ಲಿಯ ನೈಸರ್ಗಿಕ ಗವಿಗಳಲ್ಲಿ ತಪಸ್ಸು ಮಾಡಿ ಇಲ್ಲಿಯೇ ನೆಲೆಸಿದ್ದರಿಂದ ಈ ನೆಲೆಯನ್ನು ಸನ್ಯಾಸಪ್ಪನಗವಿ, ಸನ್ಯಾಸಿ ಮಠ, ಚಿಕ್ಕೆಬಂಡೆಗವಿ ಎಂದು ನಾನಾ ಹೆಸರುಗಳಿಂದ ಸ್ಥಳಿಯವಾಗಿ ಕರೆಯಲಾಗುತ್ತದೆ.[೨೨]

ಈ ಚಿಕ್ಕ ಬಂಡೆ ಬೆಟ್ಟದಲ್ಲಿ ಬೃಹತ್ ಶಿಲಾಯುಗದ ಕಲ್ಗೋರಿಗಳು, ಕಲ್ಲಾಸರೆ, ಶಿಲಾಯುಧಗಳು ಮತ್ತು ಬಂಡೆಯಲ್ಲಿ ರೇಖಾಚಿತ್ರಗಳಿವೆ. ಹಾಗೂ ಮೇಲ್ನೋಟಕ್ಕೆ ಜನವಾಸ ಮಾಡುವ ಜಾಗವಲ್ಲವೆಂದು ಅನಿಸಿದರೂ ಸ್ಥಳೀಯರು ಹೇಳುವ ಮೌಖಿಕ ಕಥನಗಳಿಂದ ಈ ಗುಹೆಗಳ ಚಾರಿತ್ರಿಕ ಮಹತ್ವ ತಿಳಿದುಬರುತ್ತದೆ.

ಮುಖ್ಯವಾಗಿ ಆದಿಮಾನವರು ನೆಲೆಸಿರುವ ತಾಣಗಳಲ್ಲಿ ಒಂದಾಗಿದ್ದು ತನ್ನ ವಾಸಕ್ಕೆ ಗವಿಯನ್ನು ಆಶ್ರಯಿಸಿದ ಮಾನವ ಬೆಟ್ಟಗುಡ್ಡಗಳಲ್ಲಿ ಬೇಟೆಯಾಡಿ ಆಹಾರ ಪದಾರ್ಥಗಳನ್ನು ಗುಹೆಯಲ್ಲಿ ಸಂಗ್ರಹಿಸುತ್ತಿದ್ದನು. ಇದಕ್ಕೆ ಪೂರಕವೆನ್ನುವಂತೆ ಬೆಟ್ಟದ ಮೇಲೆ ನೀರಿಗಾಗಿ ಚಿಲುಮೆಗಳನ್ನು ಮಾಡಿರುವುದು. ಒರತೆ, ಹೊಂಡಗಳು ಇಲ್ಲಿಯ ಬೆಟ್ಟಗಳ ಮೇಲೆ ಇರುವುದು ಗಮನಾರ್ಹ ಸಂಗತಿ. ಚೆಕ್ಕೆಬಂಡೆಯಲ್ಲಿ ಇಂದಿಗೂ ಕಟ್ಟಿಗೆಯ ಚೆಕ್ಕೆಯಂತೆ ಕಲ್ಲನ್ನು ಎಬ್ಬಿಸಲಾಗುತ್ತದೆ. ಈ ಬೆಟ್ಟದ ಬಂಡೆಯ ಮತ್ತೊಂದು ತುದಿಯಲ್ಲಿ ಗವಿಗಳಿವೆ. ಈ ಗವಿಗಳನ್ನು ಡಾ.ವಿರುಪಾಕ್ಷಿ ಪೂಜಾರಹಳ್ಳಿಯವರು ಮೊದಲ ಬಾರಿಗೆ ಪತ್ತೆಹಚ್ಚಿದರು.

ಇಲ್ಲಿನ ಎರಡನೇ ಗವಿಯು ೨೦× ೬೦ ಅಡಿಗಳಷ್ಟು ವೃತ್ತಾಕಾರದಲ್ಲಿದ್ದು ಈ ಗವಿಯ ಮಧ್ಯ ಭಾಗದಲ್ಲಿ ಸನ್ಯಾಸಿ ಏಕಾಂತದಲ್ಲಿ ತಪ್ಪಸ್ಸು ಮಾಡುತ್ತಿದ್ದ ಕಲ್ಲಿನ ಕಟ್ಟಡವಿದೆ ಮತ್ತು ಇದಕ್ಕೆ ಬಾಗಿಲು ಇಲ್ಲ. ೨× ೩ ಅಡಿ ಗಾತ್ರದ ಕಿಟಕಿ ಮಾತ್ರ ಇದೆ ಒಳಗಡೆ ಪ್ರವೇಶ ಮಾಡಿದರೆ ಆಳವಾದ ತಗ್ಗು ಮತ್ತೊಂದು ಕಡೆ ಕಲ್ಲಿನ ಕಟ್ಟೆ ಇರುವುದು ಕಂಡುಬರುತ್ತದೆ. ಈ ಎಲ್ಲಾ ಲಕ್ಷಣಗಳ ಹಿನ್ನೆಲೆಯಲ್ಲಿ ಈ ಗವಿಯನ್ನು ಸನ್ಯಾಸಿ ಗವಿ ಎಂದು ಕರೆಯಲಾಗುತ್ತದೆ. ಅದೇ ರೀತಿ ಮೊದಲನೆಯ ಗವಿಯ ಪಶ್ಚಿಮಕ್ಕೆ ಪ್ರವೇಶ ದ್ವಾರವಿದೆ. ಒಳಗಡೆ ವಿಶಾಲ ಪ್ರಾಂಗಣವಿದೆ ಉತ್ತರ ದಿಕ್ಕಿಗಿರುವ ಹೆಬ್ಬಂಡೆಯಲ್ಲಿ ನಂದಿಮೂರ್ತಿ ಕೆತ್ತಲಾಗಿದೆ. ಮತ್ತು ಪ್ರಾಂಗಣದ ನೆಲಕ್ಕೆ ಸ್ಥಳೀಯರು ಬಂಡೆ ಹಾಸಿ ಕಟ್ಟೆ ಕಟ್ಟಿ ಬಾಗಿಲು ನಿರ್ಮಿಸಿದ್ದಾರೆ. ಈ ಗವಿಯ ಎತ್ತರ ಮತ್ತು ಸಮತಟ್ಟಾದ ಸ್ಥಿತಿಯನ್ನು ಹೊಂದಿದೆ.

ಪ್ರಾಚೀನ ಕಾಲದ ಶಿಲಾಯುಧ, ಮಡಿಕೆಚೂರು, ಒಲೆ ಹೆಬ್ಬಂಡೆಗಳ ಮೇಲಿರುವ ರೇಖಾ ಚಿತ್ರಗಳು ಈ ಗುಹೆಯಲ್ಲಿದ್ದು ಇದು ಆದಿ ಮಾನವನ ಕುರುಹುಗಳನ್ನು ಸಾಂಕೇತಿಸುತ್ತದೆ. ಈ ಬಂಡೆಯನ್ನು 'ಚಿತ್ರಬಂಡ್ಲು' ಅನ್ನುವುದೂ ಉಂಟು. ಮತ್ತು ಈ ಪರಿಸರದಲ್ಲಿ ಕೆರೆಯೊಂದಿದ್ದು ಅದನ್ನು ಸನ್ಯಾಸಪ್ಪನಕೆರೆ ಎಂದು ಕರೆಯಲಾಗುತ್ತದೆ. ಇಂದು ಈ ಕೆರೆಯ ನೀರನ್ನು ಕೃಷಿಗೆ ಬಳಸಲಾಗುತ್ತದೆ. ಮತ್ತು ಕೆರೆಯ ಸಮೀಪದಲ್ಲಿ ನಗ್ನ ಮಾನವಾಕೃತಿಯ ರೇಖಾಚಿತ್ರವಿದೆ. ಇದೇ ನೆಲೆಯಲ್ಲಿ ಮೊಳಕಾಲ್ಮೂರಿಗೆ ಹೋಗುವ ರಸ್ತೆಯ ಎಡಪಕ್ಕದಲ್ಲಿ ಪುರಾತನ ಕುಲುಮೆ ಮತ್ತು ಕಿಟ್ಟದ ಅವಶೇಷಗಳನ್ನು ಪ್ರಸ್ತುತ ಅಧ್ಯಯನ ಸಂದರ್ಭದಲ್ಲಿ ಗುರುತಿಸಲಾಗಿದೆ. ಇದರಿಂದ ಇಲ್ಲಿ ಕಬ್ಬಿಣ ತಯಾರಿಕ ಘಟಕವನ್ನು ಸ್ಥಾಪಿಸಲಾಗಿತ್ತು ಎಂದು ತಿಳಿಯಬಹುದು. ಕಬ್ಬಿಣವನ್ನು ತಯಾರಿಸುವಾಗ ಅಶುದ್ಧವಾಗಿ ಹೊರಬಂದ ದ್ರವರೂಪವೇ ಕಿಟ್ಟವಾಗಿ ಪರಿಣಮಿಸಿದೆ. ಹೀಗೆ ಈ ನೆಲೆಯು ಪ್ರಾಗೈತಿಹಾಸಿಕ ಮಹತ್ವವನ್ನು ಪಡೆದಿದೆ ಎಂಬುದು ಗಮನಾರ್ಹ ಸಂಗತಿ.

**ಓಬಳಾಪುರ**

ಕೂಡ್ಲಿಗಿ ತಾಲೂಕಿನಿಂದ ಸುಮಾರು ೪೦.ಕಿ.ಮೀ ದೂರದಲ್ಲಿರುವ ಓಬಳಾಪುರವು ಪ್ರಾಚೀನ ನೆಲೆಯಾಗಿದೆ. ಈ ನೆಲೆಯಲ್ಲಿ ನೈಸರ್ಗಿಕ ಗವಿಯೊಂದಿದ್ದು ಇಲ್ಲಿ ಆದಿ ಮಾನವ ನೆಲೆಸಿದಂತಹ

ಕುರುಹುಗಳು ದೊರೆತಿವೆ. ಬೃಹತ್ತಾದ ಬಂಡೆಯ ಅಡಿಯಲ್ಲಿ ಗವಿಯನ್ನು ನಿರ್ಮಿಸಲಾಗಿದೆ. ಈ ನೆಲೆಯು ಹುರುಳಿಯಾಳ್ ಗ್ರಾಮಕ್ಕೆ ಹೋಗುವ ಹಾದಿಯಲ್ಲಿ ಕಂಡು ಬರುತ್ತದೆ. ಸಣ್ಣ ಪುಟ್ಟ ಗಿಡ ಮರಗಳನ್ನು, ಕಲ್ಲು ಬಂಡೆಗಳನ್ನು ಹೊಂದಿರುವ ಈ ಪ್ರದೇಶದಲ್ಲಿ ಪುರಾತನ ಕುಲುಮೆಗಳು (ಕಬ್ಬಿಣದ) ದೊರೆತಿವೆ. ಕಬ್ಬಿಣದ ಕಿಟ್ಟ ಹಾಗೂ ಮಣ್ಣಿನಿಂದ ತಯಾರಿಸಿದ ಮೂಸೆಗಳು ದೊರೆತಿವೆ. ಇದರಿಂದ ಈ ಪ್ರದೇಶದಲ್ಲಿ ಕಬ್ಬಿಣ ತಯಾರಿಸುವ ಘಟಕವನ್ನು ಸ್ಥಾಪಿಸಲಾಗಿತ್ತು ಎಂಬುದನ್ನು ಅರಿಯಬಹುದು. ಬಹುಶಃ ಕಬ್ಬಿಣದ ಅದಿರು ನೆರೆಯ ತಾಲೂಕು ಸಂಡೂರಿನಲ್ಲಿ ದೊರೆಯುತ್ತಿದ್ದರಿಂದ ಮತ್ತು ಕಬ್ಬಿಣ ತಯಾರಿಸಲು ಉತ್ತಮವಾದ ಅವಕಾಶಗಳು ಈ ನೆಲೆಯಲ್ಲಿರುವುದರಿಂದ ಈ ತರಹದ ಕುಲುಮೆಗಳು ಕಂಡು ಬಂದಿವೆ ಎಂದು ಊಹಿಸಬಹುದಾಗಿದೆ.

**ನಡುವಲಹಳ್ಳಿ**

ಕೂಡ್ಲಿಗಿ ತಾಲೂಕಿನಿಂದ ದಕ್ಷಿಣಕ್ಕೆ ಸುಮಾರು ೪೦.ಕಿ.ಮೀ ದೂರದಲ್ಲಿರುವ ಈ ನೆಲೆಯು ಹುರುಳಿಯಾಳ್ ಮಾರ್ಗವಾಗಿ ಮೀನಕೆರೆಗೆ ಹಾದುಹೋಗುವ ದಾರಿಯ ಮಧ್ಯದಿಂದ ಉತ್ತರಕ್ಕೆ ಹೋಗುವ ಹಾದಿಯಲ್ಲಿ ಈ ನೆಲೆಯು ಕಂಡುಬರುತ್ತದೆ. ನೆಲೆಯು ನಡುವಲಹಳ್ಳಿಯ ಹೊರವಲಯದಲ್ಲಿರುವ ಬೋರೆದೇವರ ಗುಡಿಯ ಪಕ್ಕದಲ್ಲಿ ಹಾದಿಕೋಣೆ ಗೋರಿಯನ್ನು ಭೀಮ ಸಮುದ್ರದ ರಂಗನಾಥ ರವರ ನೇತೃತ್ವದಲ್ಲಿ ಕೈಗೊಂಡ ಕ್ಷೇತ್ರಕಾರ್ಯದಲ್ಲಿ ಶೋಧಿಸಲಾಗಿದೆ. ಬಯಲು ಪ್ರದೇಶದಲ್ಲಿರುವ ಈ ನೆಲೆಯ ಶಿಲಾಸಮಾಧಿಯು ಸಾಧಾರಣವಾಗಿ ಸುಮಾರು ೨ ೧/೨ ಮೀ ಅಗಲ ೧ ೧/೨ ಮೀ ಎತ್ತರ ಮತ್ತು ೪.ಮೀ ಉದ್ದವಿದ್ದು ಒಂದು ಕೋಣೆರೂಪದಲ್ಲಿದೆ. ಈ ಗೋರಿಯನ್ನು ಪೂರ್ವಾಭಿಮುಖವಾಗಿ ನಿರ್ಮಿಸಲಾಗಿದ್ದು ಇದನ್ನು ನಾಲ್ಕು ಚಪ್ಪಡಿಕಲ್ಲುಗಳನ್ನು ಬಳಸಿ ನಿರ್ಮಿಸಿಲಾಗಿದೆ. ಮುಚ್ಚಳ ರೂಪದಲ್ಲಿ ಹಾಸಿರುವ ಚಪ್ಪಡಿಕಲ್ಲಿನ ಮೇಲೆ ತಿರುವುಗುಳಿಗಳಿವೆ. ಈ ರೀತಿಯಾಗಿ ತಿರುವುಗುಳಿಗಳು ಗುಡೇಕೋಟೆ ಕಂಡಿಕೋಣೆಗೋರಿಯ ಮೇಲೆ ಇರುವುದು ಕಂಡುಬರುತ್ತದೆ. ಈ ಹಾದಿ ಕೋಣೆಗೋರಿಯು ಪೂರ್ವಭಿಮುಖವಾಗಿ ಗ್ರಾನೈಟ್ ಶಿಲೆಯನ್ನು ಬಳಸಿ ನಿರ್ಮಿಸಲಾಗಿದೆ. ಇದು ಇಂದಿಗೂ ಸುಸ್ಥಿತಿಯಲ್ಲಿದೆ. ಒಟ್ಟಿನಲ್ಲಿ ನಡುವಲಹಳ್ಳಿ ನೆಲೆಯು ಶಿಲಾಗೋರಿಯಿಂದ ಪ್ರಾಗೈತಿಹಾಸಿಕ ಮಹತ್ವವನ್ನು ಪಡೆದಿದೆ.

ಒಟ್ಟಾರೆಯಾಗಿ ಕೂಡ್ಲಿಗಿ ತಾಲೂಕಿನ ಭೌಗೋಳಿಕ ಪರಿಸರವು ನೈಸರ್ಗಿಕವಾದ ಬೆಟ್ಟ ಗುಡ್ಡ, ಗಿಡಮರ, ಹಳ್ಳಕೊಳ್ಳ, ನದಿ ಹಾಗೂ ಬೃಹತ್ತಾದ ಬಂಡೆಗಲ್ಲುಗಳಿಂದ ಕೂಡಿರುವ ವಿಸ್ತಾರವಾದ ಭೂ ಪ್ರದೇಶದಲ್ಲಿ ಆದಿಮಾನವ ಪ್ರಾಗೈತಿಹಾಸಿಕ ಕಾಲದಿಂದಲೂ ವಾಸವಾಗಿದ್ದನು ಎಂಬುದು ಇಲ್ಲಿನ ವಿವಿಧ ನೆಲೆಗಳಲ್ಲಿ ದೊರೆತಿರುವ ಕುರುಹುಗಳಿಂದ ತಿಳಿದು ಬರುತ್ತದೆ. ಈ ಪ್ರದೇಶದಲ್ಲಿ ಹಲವು ವಿದ್ವಾಂಸರು ಸಂಶೋಧನೆ ಕೈಗೊಂಡು ಆದಿ ಹಳೆಯ ಶೀಲಾಯುಗದಿಂದ ಬೃಹತ್ ಶಿಲಾಯುಗದವರೆಗಿನ ಹಲವು ನೆಲೆಗಳನ್ನು ಪರಿಶೋಧಿಸುವುದರ ಮೂಲಕ ತಾಲೂಕಿನ ಪ್ರಾಗೈತಿಹಾಸಿಕ ಮಹತ್ವವನ್ನು ತಿಳಿಯ ಪಡಿಸಿದ್ದಾರೆ. ಇದುವರೆಗೂ ಈ ತಾಲೂಕಿನಲ್ಲಿ ೨೪ಕ್ಕೂ

ಹೆಚ್ಚು ಆದಿ ಮಾನವನ ನೆಲೆಗಳು ಕಂಡುಬಂದಿದ್ದು ಅವುಗಳಲ್ಲಿ ೧೭ಕ್ಕಿಂತ ಹೆಚ್ಚು ನೆಲೆಗಳು ಬೃಹತ್ ಶಿಲಾಯುಗದ ನೆಲೆಗಳಾಗಿವೆ. ಈ ನೆಲೆಗಳಲ್ಲಿ ವಿವಿಧ ಬಗೆಯ ಶಿಲಾಸಮಾಧಿಗಳು, ಕಬ್ಬಿಣದ ಅವಶೇಷಗಳು, ಮಡಿಕೆ ಚೂರುಗಳು, ರೇಖಾಚಿತ್ರಗಳು ಕಂಡುಬಂದಿದ್ದು, ಅಂದಿನ ಸಂಸ್ಕೃತಿಯ ಪ್ರಮುಖ ಆಕಾರಗಳಾಗಿವೆ ಎಂಬುದು ಈ ಅಧ್ಯಯನದ ಮೂಲಕ ತಿಳಿದುಬರುತ್ತವೆ.

**ಅಡಿಟಿಪ್ಪಣಿ**

೧. ಜಯಣ್ಣ ಯು., ಮೊಳಕಾಲ್ಮೂರು ತಾಲೂಕಿನ ಪುರಾತತ್ವೀಯ ಪರಿಸರ ಅಪ್ರಕಟಿತ ಪಿ.ಎಚ್.ಡಿ ಮಹಾಪ್ರಬಂಧ, ಪು.ಸಂ, ೧೦೬.
೨. ರಾವ್ ಕೆ.ಪಿ., ಡೆಕ್ಕನ್ ಮೆಗಲಿಥಿಸ್, ಪು.ಸಂ, ೧
೩. ಸುಂದರ ಅ., ಕರ್ನಾಟಕದ ಪ್ರಾಗೈತಿಹಾಸಕಾಲದ ಕಲೆ ಪು.ಸಂ, ೫೪
೪. ಅಂಬಳಿಕೆ ಹಿರಿಯಣ್ಣ., ಕನ್ನಡ ವಿಷಯ ವಿಶ್ವಕೋಶ, ಪು.ಸಂ, ೬೭೨
೫. ಸುಂದರ ಅ., ಚರಿತ್ರೆ ಸಂಪುಟ-೧, ಪು.ಸಂ, ೧೭೫
೬. ಅದೇ, ಪು.ಸಂ, ೧೭೫
೭. ಅದೇ, ಪು.ಸಂ, ೧೭೬
೮. ಅದೇ, ಪು.ಸಂ, ೧೭೬
೯. ಅದೇ, ಪು.ಸಂ, ೧೭೭
೧೦. ಜಯಣ್ಣ ಯು., ಪೂರ್ವೋಕ್ತ, ಪು.ಸಂ, ೧೧೯
೧೧. ಸುಂದರ ಅ., ಚರಿತ್ರೆ(ಸಂ,೧) ಪೂರ್ವೋಕ್ತ ಪು.ಸಂ, ೧೭೭
೧೨. ಸುಂದರ ಅ., ಕರ್ನಾಟಕದ ಪ್ರಾಗಿತಿಹಾಸ ಕಾಲದ ಕಲೆ, ಪು.ಸಂ, ೪೪
೧೩. ಸುಂದರ ಅ., ಪೂರ್ವೋಕ್ತ, ಪು.ಸಂ, ೧೭೮
೧೪. ಅದೇ, ಪು.ಸಂ, ೧೭೮
೧೫. ಅದೇ, ಪು.ಸಂ, ೧೭೮
೧೬. ಅದೇ, ಪು.ಸಂ, ೧೭೯
೧೭. ಅದೇ, ಪು.ಸಂ, ೧೭೯
೧೮. ರಾವ್ ಕೆ.ಪಿ., ಪೂರ್ವೋಕ್ತ, ಪು.ಸಂ, ೩
೧೯. ಗುರುರಾಜರಾವ್, ದಿ ಮೆಗಲಿಥಿಕ್ ಕಲ್ಚರ್ ಇನ್ ಸೌಥ್ ಇಂಡಿಯಾ, ಪು.ಸಂ, ೨೩೭
೨೦. ಅದೇ, ಪು.ಸಂ, ೨೩೭
೨೧. ಅದೇ, ಪು.ಸಂ, ೨೩೮
೨೨. ಅದೇ, ಪು.ಸಂ, ೨೪೦
೨೩. ಜಯಣ್ಣ ಯು., ಪೂರ್ವೋಕ್ತ, ಪು.ಸಂ, ೧೨೮
೨೪. ಗುರುರಾಜರಾವ್ ಬಿ.ಕೆ., ಪೂರ್ವೋಕ್ತ, ಪು.ಸಂ, ೨೪೨

೨೫. ರಾವ್ ಕೆ.ಪಿ., ಪೂರ್ವೋಕ್ತ, ಪು.ಸಂ, ೯
೨೬. ಅದೇ, ಪು.ಸಂ, ೨೪೬
೨೭. ಜಯಣ್ಣ ಯು., ಪೂರ್ವೋಕ್ತ, ಪು.ಸಂ, ೧೨೮
೨೮. ಅದೇ, ಪು.ಸಂ, ೧೨೯
೨೯. ಅದೇ, ಪು.ಸಂ, ೧೩೦
೩೦. ಅದೇ, ಪು.ಸಂ, ೧೩೨
೩೧. ಅದೇ, ಪು.ಸಂ, ೧೩೩
೩೨. ಅದೇ, ಪು.ಸಂ, ೧೩೩
೩೩. ಅದೇ, ಪು.ಸಂ, ೧೩೩
೩೪. ಗುರುರಾಜರಾವ್ ಬಿ.ಕೆ., ಪೂರ್ವೋಕ್ತ, ಪು.ಸಂ, ೪೩
೩೫. ಜಯಣ್ಣ ಯು., ಪೂರ್ವೋಕ್ತ, ಪು.ಸಂ, ೧೪೯
೩೬. ಸುಂದರ ಅ., ಪೂರ್ವೋಕ್ತ, ಪು.ಸಂ, ೧೮೦
೩೭. ಅದೇ, ಪು.ಸಂ, ೧೮೧
೩೮. ಅದೇ, ಪು.ಸಂ, ೧೮೧
೩೯. ಜಯಣ್ಣ ಯು., ಪೂರ್ವೋಕ್ತ, ಪು.ಸಂ, ೧೦೮
೪೦. ಅಂಬಳಿಕೆ ಹಿರಿಯಣ್ಣ, ಪೂರ್ವೋಕ್ತ, ಪು.ಸಂ, ೬೬೯
೪೧. ಜಯಣ್ಣ ಯು., ಪೂರ್ವೋಕ್ತ, ಪು.ಸಂ, ೧೦೯
೪೨. ಅದೇ, ಪು.ಸಂ, ೧೦೯
೪೩. ಶಿವತಾರಕ್ ಕೆ.ಬಿ., ಕರ್ನಾಟಕದ ಪುರಾತತ್ವ ನೆಲೆಗಳು, ಪು.ಸಂ, ೨೧
೪೪. ಸುಂದರ ಅ., ಪೂರ್ವೋಕ್ತ, ಪು.ಸಂ, ೧೩೯
೪೫. ಶಿವತಾರಕ್ ಕೆ.ಬಿ., ಪೂರ್ವೋಕ್ತ, ಪು.ಸಂ, ೩೫೫
೪೬. ಸುಂದರ ಅ., ೧೯೯೪, ಪೂರ್ವೋಕ್ತ, ಪು.ಸಂ, ೬೭-೬೮
೪೭. ಶ್ರೀನಿವಾಸ್ ಎಲ್., ಹಂಪಿ ಪರಿಸರದ ಆದಿಮಾನವನ ನೆಲೆಗಳು ಪು.ಸಂ, ೭೦
೪೮. ಅದೇ, ಪು.ಸಂ, ೭೪
೪೯. ಅಂಬಳಿಕೆ ಹಿರಿಯಣ್ಣ, ಪೂರ್ವೋಕ್ತ, ಪು.ಸಂ, ೨೫೧
೫೦. ಅದೇ, ಪು.ಸಂ, ೨೫೨
೫೧. ಜಯಣ್ಣ ಯು., ಪೂರ್ವೋಕ್ತ, ಪು.ಸಂ, ೧೦೬
೫೨. ಅದೇ, ಪು.ಸಂ, ೧೦೬
೫೩. ಅದೇ, ಪು.ಸಂ, ೧೦೭
೫೪. ಅದೇ, ಪು.ಸಂ, ೧೦೭

೫೫. ಅದೇ, ಪು.ಸಂ, ೧೦೭

೫೬. ಅದೇ, ಪು.ಸಂ, ೧೦೮

೫೭. ಅದೇ, ಪು.ಸಂ, ೧೦೯

೫೮. ಅದೇ, ಪು.ಸಂ, ೧೦೯

೫೯. ಅದೇ, ಪು.ಸಂ, ೧೦೯

೬೦. ತಿಪ್ಪೇಸ್ವಾಮಿ ಹೆಚ್., ಕೂಡ್ಲಿಗಿ ತಾಲೂಕಿನ ಅಪರೂಪದ ಮಾನವಾಕೃತಿಗಳು ಇತಿಹಾಸ ದರ್ಶನ (ಸಂ,೧೪) ಪು.ಸಂ, ೨೦

೬೧. ಅದೇ, ಪು.ಸಂ, ೨೧

೬೨. ಬಸವರಾಜ ಎಚ್.ಎಂ., ಗುಡೇಕೋಟೆ ಒಂದು ಚಾರಿತ್ರಿಕ ಅಧ್ಯಯನ ಅಪ್ರಕಟಿತ ಎಂಫಿಲ್ ಪ್ರಬಂಧ, ಪು.ಸಂ, ೫೪

೬೩. ಭೀಮಣ್ಣ ಗಜಾಪುರ, ಕನಸ್ಸುಗಳಿಗೆ ರೆಕ್ಕೆ ಕಟ್ಟಿದವರು, ಪು.ಸಂ, ೫೪

೬೪. ಸುಂದರ ಅ. ೧೯೯೪ ಪೂರ್ವೋಕ್ತ, ಪು.ಸಂ, ೬೭-೬೮

೬೫. ಜಯಣ್ಣ ಯು., ಪೂರ್ವೋಕ್ತ, ಪು.ಸಂ, ೧೩೨

೬೬. ಮೆಡೋಸ್ ಟೇಲರ್, ದಿ ಮೆಗಲೆಥಿಕ್ ಧಮ್‌ಬೂಸ್ ಅಂಡ್ ಅದರ್ ರಿಮೈನ್ಸ್ ಇನ್ ದ ಡೆಕ್ಕನ್, ಪು.ಸಂ, ೮೬-೮೭

೬೭. ತಿಪ್ಪೇಸ್ವಾಮಿ ಹೆಚ್., ಪೂರ್ವೋಕ್ತ ಪು.ಸಂ, ೨೨

೬೮. ಭೀಮಸಮುದ್ರ ರಂಗನಾಥ., ಕೂಡ್ಲಿಗಿ ತಾಲೂಕಿನಲ್ಲಿ ಪುರಾತತ್ವ ನೆಲೆಗಳು (ಅ ಪ್ರಕಟಿತ ಕೃತಿ)

೬೯. ಭೀಮಣ್ಣ ಗಜಾಪುರ, ಪೂರ್ವೋಕ್ತ, ಪು.ಸಂ, ೫೩

೭೦. ಶ್ರೀನಿವಾಸ್ ಎಲ್., ಪೂರ್ವೋಕ್ತ, ಪು.ಸಂ, ೫೩

೭೧. ಅದೇ, ಪು.ಸಂ, ೫೯

೭೨. ವಿರೂಪಾಕ್ಷಿ ಪೂಜಾರಹಳ್ಳಿ, ಚಿನ್ನಹಗರಿ ಸಿರಿ, ಪು.ಸಂ, ೨೪-೨೬

# ಅಧ್ಯಾಯ ನಾಲ್ಕು

## ಬೃಹತ್ ಶಿಲಾಯುಗದ ನೆಲೆಗಳಲ್ಲಿ ದೊರೆತ ಅವಶೇಷಗಳು

೪.೧ ಶಿಲಾಸಮಾಧಿಗಳು

೪.೨ ಮೃತ್ಪಾತ್ರೆಗಳು

೪.೩ ಕಬ್ಬಿಣದ ಅವಶೇಷಗಳು

೪.೪ ಇತರೆ ಅವಶೇಷಗಳು

# ಅಧ್ಯಾಯ : ನಾಲ್ಕು

## ಬೃಹತ್ ಶಿಲಾಯುಗದ ನೆಲೆಗಳಲ್ಲಿ ದೊರೆತ ಅವಶೇಷಗಳು.

ಕೂಡ್ಲಿಗಿ ತಾಲೂಕು ಪರಿಸರದಲ್ಲಿ ಇದುವರೆಗೆ ಹಲವು ಪ್ರಾಗೈತಿಹಾಸಿಕ ನೆಲೆಗಳನ್ನು ವಿದ್ವಾಂಸರು ಪರಿಶೋಧಿಸಿದ್ದಾರೆ. ಅವುಗಳಲ್ಲಿ ಬಹುತೇಕ ನೆಲೆಗಳು ಬೃಹತ್ ಶಿಲಾಯುಗದ ನೆಲೆಗಳಾಗಿವೆ. ಈ ನೆಲೆಗಳಲ್ಲಿ ವಿವಿಧ ಬಗೆಯ ಅವಶೇಷಗಳು ಕಂಡು ಬಂದಿವೆ. ಅವುಗಳಲ್ಲಿ ಶಿಲಾಸಮಾಧಿಗಳು, ಮೃತ್ಪಾತ್ರೆಗಳು, ಕಬ್ಬಿಣ ಕುರುಹುಗಳಾದ ಕುಲುಮೆಗಳು, ಕಬ್ಬಿಣದ ಕಿಟ್ಟ ಹಾಗೂ ಇತರೆ ಅವಶೇಷಗಳಾದ ರೇಖಾಚಿತ್ರಗಳು, ಗೀರುಚಿತ್ರಗಳು, ಕುಟ್ಟುಚಿತ್ರಗಳು, ಗವಿವರ್ಣ ಚಿತ್ರಗಳು ಮತ್ತು ಅಲಂಕಾರಿಕ ವಸ್ತುಗಳು ದೊರೆತಿವೆ. ಈ ಅವಶೇಷಗಳನ್ನು ಕೆಳಕಂಡಂತೆ ವಿವರಿಸಲಾಗುವುದು.

### ೪.೧. ಶಿಲಾ ಸಮಾಧಿಗಳು

ಬೃಹತ್ ಶಿಲಾಯುಗ ಸಂಸ್ಕೃತಿಯ ಜನರ ನಿತ್ಯ ಜೀವನವನ್ನು ಕುರಿತು ಯಾವುದೇ ಪ್ರಕಾರದ ನಿರ್ಮಿತಿಗಳು ಇದುವರೆಗೂ ತಿಳಿಯದೇ ಇದ್ದರೂ ಈ ಸಂಸ್ಕೃತಿಯ ವಿವಿಧ ಪ್ರಕಾರದ ಶವಸಂಸ್ಕಾರದ ಶಿಲಾ ಸಮಾಧಿಗಳು ಸಾವಿರಾರು ನೆಲೆಗಳಲ್ಲಿ ನೂರಾರು ಪ್ರಕಾರದಲ್ಲಿವೆ. ಈ ಶಿಲಾನಿರ್ಮಿತಿಗಳ ವೈವಿದ್ಯತೆ, ಪ್ರಕಾರ ಹಾಗೂ ಅವುಗಳು ವಿಶಿಷ್ಟ ಲಕ್ಷಣಗಳಿಂದ ಕೂಡಿರುವುದರಿಂದ ಈ ಸಂಸ್ಕೃತಿಯನ್ನು ಬೃಹತ್ ಶಿಲಾಯುಗ ಸಂಸ್ಕೃತಿ ಎಂದು ಗುರುತಿಸಲಾಗಿದೆ.

ಕರ್ನಾಟಕದಲ್ಲಿ ಏಳು ಪ್ರಕಾರದ ಶವ ಸಂಸ್ಕಾರದ ಶಿಲಾಸಮಾಧಿಗಳಿವೆ. ಅವುಗಳನ್ನು ಹಾದಿಕೋಣೆ ಸಮಾಧಿ, ಕಂಡಿಕೋಣೆ ಸಮಾಧಿ, ನಿಲುಸುಕಲ್ಲುಗಳು, ಚಕ್ಕೆ ಕಲ್ಲುಗಳಿಂದ ತುಂಬಿದ ಕಲ್ಲುವೃತ್ತಗಳು, ವರ್ತುಲಗಡ್ಡೆಗಳು, ಕಲ್ಲುವೃತ್ತಗಳು, ಶವಕುಣಿಗಳು ಪ್ರಮುಖವಾಗಿವೆ.[೧] ಈ ರೀತಿಯ ಸಮಾಧಿಗಳು ಪ್ರಸ್ತುತ ಅಧ್ಯಯನ ಪ್ರದೇಶವಾದ ಕೂಡ್ಲಿಗಿ ತಾಲೂಕಿನ ನೆಲೆಗಳಲ್ಲಿ ಕಂಡುಬಂದಿವೆ.

### ೪.೧.೧. ಹಾದಿಕೋಣೆ ಸಮಾಧಿ

ಈ ರೀತಿಯ ಸಮಾಧಿಯನ್ನು ಕೂಡ್ಲಿಗಿ ತಾಲೂಕಿನ ಹಾಲಸಾಗರ, ಗುಡೇಕೋಟೆ, ಜರಿಮಲೆ, ನಡುವಲಹಳ್ಳಿ, ಅಪ್ಪಯ್ಯನಹಳ್ಳಿ ಮುಂತಾದ ನೆಲೆಗಳಲ್ಲಿ ವಿದ್ವಾಂಸರು ಗುರುತಿಸಿದ್ದಾರೆ. ಆದರೆ

ಅವುಗಳು ನಿಧಿಗಳ್ಳರಿಂದ ಹಾಗೂ ದುಷ್ಕರ್ಮಿಗಳ ಕೈಗೆ ಸಿಕ್ಕು ವಿನಾಶಕ್ಕೆ ಒಳಗಾಗಿರುವುದು ಕಂಡುಬರುತ್ತದೆ. ಕೆಲವೊಂದು ಕಡೆ ಮಾತ್ರ ಇಂದಿಗೂ ಸುಸ್ಥಿತಿಯಲ್ಲಿರುವುದು ಅಪರೂಪವೆನಿಸಿದೆ. ಪ್ರಸ್ತುತ ಅಧ್ಯಯನ ಕ್ಷೇತ್ರವಾದ ನಡುವಲಹಳ್ಳಿಯ ಹೊರವಲಯದಲ್ಲಿ ಅಂದರೆ ತಾಲೂಕಿನಿಂದ ಸುಮಾರು ೪೦.ಕಿ.ಮೀ ದೂರದಲ್ಲಿ ಇಂದಿಗೂ ಮಳೆ, ಗಾಳಿ ಹಾಗೂ ಇನ್ನಿತರ ಪ್ರಕೃತಿ ವಿಕೋಪಗಳಿಗೆ ತುತ್ತಾಗದೇ ಸುಸ್ಥಿತಿಯಲ್ಲಿರುವ ಹಾದಿಕೋಣೆ ಸಮಾಧಿಯನ್ನು ಶೋಧಿಸಲಾಗಿದೆ.

ಬಯಲು ಪ್ರದೇಶವಾದ ಈ ನೆಲೆಯಲ್ಲಿ ಪೂರ್ವಾಭಿಮುಖವಾಗಿ ನಿರ್ಮಾಣ ಮಾಡಿರುವ ಈ ಸಮಾಧಿಯನ್ನು ಗ್ರಾನೈಟ್ ಶಿಲೆಯ ನಾಲ್ಕು ಚಪ್ಪಡಿ ಕಲ್ಲುಗಳನ್ನು ಬಳಸಿ ನಿರ್ಮಿಸಲಾಗಿದೆ. ಸಮಾಧಿಯು ಸುಮಾರು ೨ ೧/೨ ಮೀ ಅಗಲ, ೧ ೧/೨ ಮೀ ಎತ್ತರ ೪.ಮೀ ಉದ್ದವಿದ್ದು ಒಂದು ಕೋಣೆಯ ರೂಪದಲ್ಲಿ ಗೋಚರಿಸುತ್ತದೆ. ಹಾಗೂ ವಿಶೇಷವಾಗಿ ಮೂರು ಚಪ್ಪಡಿಕಲ್ಲುಗಳನ್ನು ಪರಸ್ಪರ ಅಭಿಮುಖವಾಗಿ ನಿಲ್ಲಿಸಲಾಗಿದೆ. ಮುಚ್ಚಳ ರೂಪದಲ್ಲಿ ಹಾಸಿರುವ ಚಪ್ಪಡಿಕಲ್ಲಿನ ಮೇಲೆ ತಿರುವುಗುಳಿಗಳಿರುವುದನ್ನು ಗುರುತಿಸಲಾಗಿದೆ. ಈ ರೀತಿಯ ಸಮಾಧಿಗಳು ವಿವಿಧಕಡೆಗಳಲ್ಲಿ ದೊರಕಿರುವುದು ಗಮನಾರ್ಹವಾಗಿದೆ. ಈ ಸಮಾಧಿಯ ಸಮೀಪ ಭೈರೇ ದೇವರ ಗುಡಿಯನ್ನು ನಿರ್ಮಿಸಲಾಗಿದೆ.

### ೪.೧.೨. ಕಂಡಿಕೋಣೆ ಸಮಾಧಿಗಳು

ಈ ಮಾದರಿಯ ಸಮಾಧಿಗಳು ಗುಡೇಕೋಟೆ, ಕುಮತಿ ಮೊದಲಾದ ಸ್ಥಳಗಳಲ್ಲಿ ಕಂಡು ಬಂದಿವೆ. ಆದರೆ ಎಲ್ಲಾ ನೆಲೆಗಳಲ್ಲಿ ಇಂದಿಗೂ ಅಸ್ಥಿತ್ವದಲ್ಲಿಲ್ಲ. ಗುಡೇಕೋಟೆ ನೆಲೆಯ ಆಗ್ನೇಯ ದಿಕ್ಕಿನಲ್ಲಿ ಕಲ್ಲುಗಣಿಗಾರಿಕೆ ನಡೆಯುವ ಬೆಟ್ಟದಲ್ಲಿ ಕಂಡಿಕೋಣೆ ಸಮಾಧಿಯು ಕಂಡು ಬಂದಿದೆ. ಈ ಸಮಾಧಿಯನ್ನು ಗ್ರಾನೈಟ್ ಶಿಲೆಯನ್ನು ಬಳಸಿ ನಿರ್ಮಾಣ ಮಾಡಲಾಗಿದೆ. ಚತುರಸ್ರಾಕಾರದ ಪೆಟ್ಟಿಗೆಯಂತೆ ಹಾಗೂ ಒಂದು ಮೇಜಿನ ರೂಪದಲ್ಲಿರುವ ಈ ಕಲ್ಗೋರಿಯು ಹೆಚ್ಚು ಕಡಿಮೆ ಅಷ್ಟೇ ಸುತ್ತಳತೆ ಹಾಗೂ ಉದ್ದಗಲ ಹೊಂದಿದ್ದು, ನಾಲ್ಕು ಬದಿಗೂ ಒಂದಕ್ಕೊಂದು ಆನಿಸಿ ಲಂಭವಾಗಿ ಚಪ್ಪಡಿಕಲ್ಲುಗಳನ್ನು ನಿಲ್ಲಿಸಲಾಗಿದೆ. ಮತ್ತು ಛತ್ತಿಯ ಮೇಲೆ ದೊಡ್ಡದಾದ ಚಪ್ಪಡಿಕಲ್ಲನ್ನು ಮುಚ್ಚಳರೂಪದಲ್ಲಿ ಹಾಸಲಾಗಿದೆ. ಇದರ ಮೇಲ್ಬಾಗದಲ್ಲಿ ತಿರುವುಗುಳಿಗಳನ್ನು ರಚಿಸಲಾಗಿದೆ. ವಿಶೇಷವಾಗಿ ಪೂರ್ವಭಿಮುಖವಾಗಿ ಲಂಭವಾಗಿ ನಿಲ್ಲಿಸಿದ ಚಪ್ಪಡಿಕಲ್ಲಿಗೆ ಕಂಡಿಯನ್ನು ವೃತ್ತಕಾರವಾಗಿ ಕೊರೆಯಲಾಗಿದೆ. ಹಾಗೂ ವಿಶೇಷವಾಗಿ ಈ ಗೋರಿಯ ಒಳಭಾಗದಲ್ಲಿ ಅಂದರೆ ಎಡಗಡೆಯ ಚಪ್ಪಡಿಯಲ್ಲಿ ಮಾನವಾಕೃತಿಯ ಐದು ರೇಖಾಚಿತ್ರಗಳು ಚಿಕ್ಕಗಾತ್ರದಲ್ಲಿ ರಚಿಸಿರುವುದು ಕಂಡುಬರುತ್ತದೆ. ಇಂದಿಗೂ ಈ ತಾಲೂಕಿನಲ್ಲಿ ಸುಸ್ಥಿತಿಯಲ್ಲಿರುವ ಏಕೈಖ ಕಂಡಿಕೋಣೆ ಸಮಾಧಿ ಇದಾಗಿದೆ. ಇದೇ ರೀತಿಯ ಸಮಾಧಿಯು ತಾಲೂಕಿನ ಕುಮತಿಗ್ರಾಮದ ಕೆ.ಎಂ.ತಿಪ್ಪೇರುದ್ರಯ್ಯನವರ ಜಮೀನಿನಿಂದ ೧.ಕಿ.ಮೀ.ದೂರದಲ್ಲಿ ಕಂಡು ಬಂದಿದೆ. ಈ ಸಮಾಧಿಯನ್ನು ೧೯೬೭ರಲ್ಲಿ ಪುರಾತತ್ವ ಇಲಾಖೆ ಬೆಂಗಳೂರು ಶಾಖೆಯವರು ಕೆ.ವಿ.ಪೂಣಚ್ಚ ಇವರ ನೇತೃತ್ವದಲ್ಲಿ ಹಮ್ಮಿಕೊಂಡಿದ್ದ ಗ್ರಾಮಾಂತರ ಸಮೀಕ್ಷಾ ಕಾರ್ಯ ಸಂದರ್ಭದಲ್ಲಿ ಈ ನೆಲೆಯನ್ನು ಅನ್ವೇಷಿಸಿ ವರದಿ ಮಾಡಿದರು.[೨]

ಈ ಸಮಾಧಿಯನ್ನು ಸುಮಾರು ನಾಲ್ಕೈದು ಸಮಾನಾಂತರವಾದ ದಪ್ಪ ಚಪ್ಪಡಿಕಲ್ಲುಗಳನ್ನು ಬಳಸಿ ನಿರ್ಮಾಣ ಮಾಡಲಾಗಿದೆ. ಭೂಮಟ್ಟದಿಂದ ೬ಮೀಟರ್ ಎತ್ತರವಾಗಿರುವ ಈ ಸಮಾಧಿಯು ಇಂದು ಚೆಲ್ಲಾಪಿಲ್ಲಿಯಾಗಿ ಬಿದ್ದಿರುವುದನ್ನು ಕಾಣಬಹುದು. ಈ ಸಮಾಧಿಯ ಕಂಡಿಯು ೧೦ರಿಂದ ೧೨ ಡೈಮೀಟರ್‌ನಷ್ಟಿದೆ. ಹಾಗೂ ಗ್ರಾನೈಟ್ ಶಿಲೆಯಿಂದ ನಿರ್ಮಾಣ ಮಾಡಲಾಗಿದ್ದು ಇವುಗಳನ್ನು ಸ್ಥಳೀಯವಾಗಿ ಬೇಟೆಯಾಡುವ ಮನೆ, ಪಾಂಡವರ ಗುಡಿ, ಮೊರೆಯರ (ಚಿಕ್ಕ ಮನುಷ್ಯರ ವಾಸದ ಮನೆ) ಕಲ್ಮನೆ ಹೀಗೆ ವಿವಿಧ ಹೆಸರುಗಳಿಂದ ಕರೆಯಲಾಗುತ್ತದೆ.

### ೪.೧.೩. ಚಕ್ಕೆಕಲ್ಲುಗಳಿಂದ ತುಂಬಿದ ಕಲ್ಲುವೃತ್ತ ಸಮಾಧಿ

ಈ ರೀತಿಯ ಸಮಾಧಿಗಳು ಕರ್ನಾಟಕದಲ್ಲಿ ಹಲವು ನೆಲೆಗಳಲ್ಲಿ ಕಂಡು ಬಂದಿವೆ. ಪ್ರಸ್ತುತ ಅಧ್ಯಯನ ಪ್ರದೇಶವಾದ ಕೂಡ್ಲಿಗಿ ತಾಲೂಕಿನ ಮಡಕಲಕಟ್ಟೆ ಎಂಬ ನೆಲೆಯಲ್ಲಿ ಈ ಮಾಧರಿಯ ಸಮಾಧಿಯನ್ನು ಕ್ಷೇತ್ರ ಕಾರ್ಯ ಸಂದರ್ಭದಲ್ಲಿ ಶೋಧಿಸಲಾಗಿದೆ. ಈ ನೆಲೆಯು ತಾಲೂಕು ಕೇಂದ್ರದಿಂದ ಸುಮಾರು ೩೫ ಕಿ.ಮೀ ದೂರದಲ್ಲಿ ಚಿಕ್ಕ ಜೋಗಿಹಳ್ಳಿ ಸಮೀಪದಲ್ಲಿ ಕಂಡುಬರುತ್ತದೆ. ಈ ನೆಲೆಯಲ್ಲಿ ಎರಡು ಸಮಾಧಿಗಳನ್ನು ಮಡಕಲ ಕಟ್ಟೆ ಗ್ರಾಮದಿಂದ ಗುಂಡುಮುಣುಗು ಗ್ರಾಮಕ್ಕೆ ಹೋಗುವ ರಸ್ತೆಯ ಬಲ ಮತ್ತು ಎಡ ಬದಿಯಲ್ಲಿ ಚಕ್ಕೆಕಲ್ಲುಗಳಿಂದ ತುಂಬಿದ ಕಲ್ಲುವೃತ್ತಮಾದರಿಯ ಸಮಾಧಿಗಳನ್ನು ಗುರುತಿಸಲಾಗಿದ್ದು, ಇವುಗಳಲ್ಲಿ ಬಲಬದಿಯ ಸಮಾಧಿಯು ಉತ್ತರ ಮತ್ತು ದಕ್ಷಿಣಾಭಿಮುಖವಾಗಿರುವ ಈ ಶಿಲಾಸಮಾಧಿನ್ನು ನಾಲ್ಕು ದಿಕ್ಕುಗಳಲ್ಲಿ ಚಪ್ಪಡಿಕಲ್ಲುಗಳನ್ನು ಒಂದಕ್ಕೊಂದು ಆನಿಸಿ ನೆಟ್ಟಿರುತ್ತಾರೆ. ಮಧ್ಯದಲ್ಲಿ ಶವ ಸಂಸ್ಕಾರವನ್ನು ಮಾಡಿರಬಹುದಾಗಿದೆ. ಮತ್ತು ಈ ಸಮಾಧಿಯ ಛತ್ತಿಯ ಮೇಲೆ ಚಪ್ಪಡಿಕಲ್ಲು ಕಂಡುಬಂದಿಲ್ಲ. ಆದರೆ ಭೂ ಮೇಲ್ಮಟ್ಟದಿಂದ ಚಪ್ಪಡಿಕಲ್ಲುಗಳನ್ನು ಮೇಲಕ್ಕೆ ಎತ್ತರಿಸಲಾಗಿದೆ. ಹಾಗೂ ಈ ಸಮಾಧಿಯು ಆಯಾತಾಕಾರವಾಗಿರುವುದು ಕಂಡುಬರುತ್ತದೆ.

ಈ ಸಮಾಧಿಯ ಬಗ್ಗೆ ಸ್ಥಳೀಯ ಜನರನ್ನು ವಿಚಾರಿಸಿದಾಗ ಇವು ಹಿರಿಯರ ಕಟ್ಟೆಗಳು ಎಂಬ ಹೇಳಿಕೆಯನ್ನು ನೀಡುತ್ತಾರೆ. ಈ ಮಾದರಿಯ ಸಮಾಧಿಯ ಅವಶೇಷವು ಇದೇ ನೆಲೆಯಲ್ಲಿ ಸುಮಾರು ೧೦೦ ಮೀಟರ್ ಅಂತರದಲ್ಲಿ ಕಂಡುಬಂದಿದೆ. ಆದರೆ ಸಮಾಧಿಯ ಲಕ್ಷಣವನ್ನು ಖಚಿತವಾಗಿ ಗುರುತಿಸಲಾಗಿಲ್ಲ. ಏಕೆಂದರೆ ಚಪ್ಪಡಿಕಲ್ಲುಗಳು ಚೆಲ್ಲಾಪಿಲ್ಲಿಯಾಗಿ ಬಿದ್ದು ಸಾಕಷ್ಟು ಹಾಳಾಗಿರುವುದು ಕಂಡುಬರುತ್ತದೆ. ಆದರೂ ಈಗಾಗಲೇ ಇದೆ ನೆಲೆಯಲ್ಲಿ ಗುರುತಿಸಿರುವ ಸಮಾಧಿಯ ಹಿನ್ನೆಲೆಯಲ್ಲಿ ಈ ಎರಡು ಒಂದೇ ಕಾಲಘಟ್ಟದಲ್ಲಿ ಏಕರೀತಿಯಲ್ಲಿ ನಿರ್ಮಾಣವಾಗಿರಬಹುದು ಎಂಬ ತಿರ್ಮಾನಕ್ಕೆ ಬರಲಾಗಿದೆ. ಈ ರೀತಿಯ ಸಮಾಧಿಗಳು ತಾಲೂಕಿನ ಪೂರ್ವದಲ್ಲಿರುವ ಅಪ್ಪಯ್ಯನಹಳ್ಳಿ ಹಾಲಸಾಗರ, ಮಹದೇವಪುರ, ಗುಡೇಕೋಟೆಗಳಲ್ಲಿಯೂ ಈ ಮಾದರಿಯ ಶಿಲಾಸಮಾಧಿಗಳು ಕಂಡುಬಂದಿವೆ.

### ೪.೧.೪. ನಿಲುಸುಗಲ್ಲುಗಳು

ಕೂಡ್ಲಿಗಿ ತಾಲೂಕಿನಲ್ಲಿ ಬೃಹತ್ ಶಿಲಾಯುಗದ ನೆಲೆಗಳಲ್ಲಿ ಕಂಡುಬರುವ ಅವಶೇಷಗಳಲ್ಲಿ

ನಿಲುಸುಗಲ್ಲುಗಳು ಪ್ರಮುಖವಾಗಿವೆ. ಇವು ತಾಲೂಕಿನ ಕುಮತಿ ಮತ್ತು ಹುಲಿಕುಂಟೆ ನೆಲೆಗಳಲ್ಲಿ ವಿಶೇಷವಾಗಿ ಕಂಡುಬಂದಿರುವುದನ್ನು ವಿದ್ವಾಂಸರು ಶೋಧಿಸಿದ್ದಾರೆ. ಈ ಅವಶೇಷಗಳನ್ನು ಮಾನವಾಕೃತಿಶಿಲೆ (Anthromorpic figars), ಮಾನವಾಕೃತಿಗೊಂಬೆಗಳು, ಮಾನವಾಕೃತಿನಿರ್ಮಿತಿಗಳು, ಮುಂತಾದ ಹೆಸರಿನಿಂದ ಕರೆಯಲಾಗುತ್ತದೆ.

ಹುಲಿಕುಂಟೆ ನೆಲೆಯು ಕೂಡ್ಲಿಗಿ ತಾಲೂಕಿನಿಂದ ೩೧.ಕಿ.ಮೀ ದೂರದಲ್ಲಿದ್ದು, ಕರ್ನಾಟಕದಲ್ಲಿ ಮೊದಲ ಬಾರಿಗೆ ಶಿಲಾವೃತ್ತದೊಳಗೆ ಮೂರು ಮಾನವಾಕೃತಿಯ ಏಕಶಿಲಾ ಸಮುಚ್ಚಯಗಳನ್ನು ಮತ್ತು ಮಡಿಕೆ ಚೂರು, ಕಬ್ಬಿಣ ತಯಾರಿಸುವ ಕೆಲ ಅವಶೇಷಗಳನ್ನು ೧೯೯೯ರಲ್ಲಿ ಕನ್ನಡ ವಿಶ್ವ ವಿದ್ಯಾಲಯದ ಪುರಾತತ್ವ ವಿಭಾಗದ ಸಂಶೋಧನಾ ವಿದ್ಯಾರ್ಥಿಯಾದ ಎಚ್.ತಿಪ್ಪೇಸ್ವಾಮಿ ತನ್ನ ಗೆಳೆಯರಾದ ಭೀಮ ಸಮುದ್ರ ರಂಗನಾಥ ಮತ್ತು ಡಿಸ್ಕವರಿ ಟ್ರೂಪ್ ಇತರೆ ಸದಸ್ಯರನೆರವಿನೊಂದಿಗೆ ಹಮ್ಮಿಕೊಂಡಿದ್ದ ಗ್ರಾಮ ಸರ್ವೇಕ್ಷಣಾ ಕಾರ್ಯದಲ್ಲಿ ಶೋಧಿಸಿದ್ದಾರೆ.[೩]

ಈ ನೆಲೆಯು ಹುಲಿಕುಂಟೆ ಗ್ರಾಮದ ವಾಯುವ್ಯ ಭಾಗಕ್ಕೆ ಸುಮಾರು ೨.ಕಿ.ಮೀ ದೂರದಲ್ಲಿ ಹರಿಜನ ಬೋರಕ್ಕ ಎಂಬುವರ ಜಮೀನಿನಲ್ಲಿ ಈ ಮಾನವಾಕಾರದ ಶಿಲೆಗಳಿವೆ. ಇವುಗಳಲ್ಲಿ ಒಂದು ಮಾತ್ರ ಸುಸ್ಥಿತಿಯಲ್ಲಿದೆ ಇನ್ನುಳಿದಂತೆ ಭಗ್ನವಾಗಿವೆ. ಈ ಮಾನವಾಕೃತಿಯ ಶಿಲೆಗಳನ್ನು ಸ್ಥಳೀಯವಾಗಿ ದೊರೆಯುವ ಗ್ರಾನೈಟ್ ಶಿಲೆಯ ಅಗಲವಾದ ಶಿಲಾಫಲಕಗಳಿಂದ ನಿರ್ಮಿಸಲಾಗಿದೆ. ಇದರ ಎತ್ತರ ೧.೮೨ ಮೀಟರ್, ಅಗಲ ೧.೧೯ ಮೀಟರ್ ಆಗಿದ್ದು ದಪ್ಪ ೧೫ ಸೇ.ಮೀ ಇದೆ. ಈ ಶಿಲ್ಪಗಳನ್ನು ದಕ್ಷಿಣೋತ್ತರವಾಗಿ ನಿಲ್ಲಿಸಲಾಗಿದ್ದು ಪೂರ್ವಾಭಿಮುಖವಾಗಿವೆ. ಇದೇ ರೀತಿಯ ಮಾನವಾಕೃತಿಯ ಶಿಲೆಗಳು ಕುಮತಿಗ್ರಾಮದಲ್ಲಿ ಕಂಡುಬಂದಿವೆ.

**ಕುಮತಿ**

ಈ ನೆಲೆಯು ಕೂಡ್ಲಿಗಿ ತಾಲೂಕು ಕೇಂದ್ರದಿಂದ ಸುಮಾರು ೪೦.ಕಿ.ಮೀ ದೂರದಲ್ಲಿದೆ. ಬಯಲು ಪ್ರದೇಶವಾದ ಈ ನೆಲೆಯಲ್ಲಿ ಸಣ್ಣ ಸಣ್ಣ ಮಣ್ಣಿನ ಗುಡ್ಡಗಳನ್ನು ಕಾಣಬಹುದು. ಮಳೆ ಪ್ರಮಾಣ ಅಷ್ಟೇನು ಹೇಳಿಕೊಳ್ಳುವಂತೆ ಹೆಚ್ಚಾಗಿಲ್ಲ. ಆದರೂ ಸಮೀಪದಲ್ಲಿ ಚಿನ್ನಹಗರಿ ನದಿಯು ಹರಿದು ಹೋಗುತ್ತದೆ. ಈ ನೆಲೆಯನ್ನು ೧೯೬೬ರಲ್ಲಿ ಕೆ.ವಿ.ಪೂಣಚ್ಚ ಇವರ ನೇತೃತ್ವದಲ್ಲಿ ಪುರಾತತ್ವ ಇಲಾಖೆ ಬೆಂಗಳೂರು ಶಾಖೆಯವರು ಹಮ್ಮಿಕೊಂಡಿದ್ದ ಗ್ರಾಮಾಂತರ ಸಮೀಕ್ಷ ಕಾರ್ಯದಲ್ಲಿ ಅನ್ವೇಷಿಸಿ ವರದಿಮಾಡಿತು.

ಬೃಹತ್ ಶಿಲಾಯುಗದ ಶಿಲಾ ಸಮಾಧಿ ನಿರ್ಮಿತಿಗಳಲ್ಲಿ ಇವುಗಳು ಅಪರೂಪದ ಏಳು ಮಾನವಾಕಾರದ ಏಕಶಿಲಾ ಸಮುಚ್ಚಗಳಾಗಿದ್ದು, ಗ್ರಾಮದ ಕೆರೆಯ ದಂಡೆಯ ಉತ್ತರಕ್ಕೆ ಸುಮಾರು ೩೦೦.ಮೀ. ದೂರದಲ್ಲಿನ ಕೆ.ಎಂ.ತಿಪ್ಪೇರುದ್ರಯ್ಯ ಎಂಬುವರ ಜಮೀನಿನಲ್ಲಿ ಈ ಸಮುಚ್ಚಯಗಳು ಕಂಡುಬಂದಿವೆ. ಇವುಗಳಲ್ಲಿ ಎರಡು ಮಾತ್ರ ಸುಸ್ಥಿತಿಯಲ್ಲಿದ್ದು, ಇನ್ನುಳಿದಂತೆ ಭಗ್ನಗೊಂಡಿವೆ.

ಸ್ಥಳೀಯವಾಗಿ ದೊರೆಯುವ ಗ್ರಾನೈಟ್ ಶಿಲೆಯನ್ನು ಉಪಯೋಗಿಸಿ ಅಗಲವಾದ ಶಿಲಾಫಲಕಗಳನ್ನು ದಕ್ಷಿಣೋತ್ತರವಾಗಿ ಯೋಜಿಸಲಾಗಿದೆ. ಮತ್ತು ಪೂರ್ವಾಭಿಮುಖವಾಗಿ ನಿಲ್ಲಿಸಲಾಗಿದ್ದು ಇವುಗಳ ಅಳತೆಯು ಈ ರೀತಿಯಿದೆ.

ಎಡಭಾಗದ ಶಿಲ್ಪವು ೩.೦೨ಮೀ ಎತ್ತರವಿದ್ದು ಇದರ ಎದೆಭಾಗದ ಅಗಲ ೨.೪೨ ಮೀ ಇದೆ. ಅಲ್ಲದೆ ಅದರ ತಳಭಾಗ ೧.೪೬ಮೀ ಅಳತೆ ಹೊಂದಿದೆ. ಇದೇ ರೀತಿ ಬಲಭಾಗದ ಶಿಲ್ಪವು ೩.೦೭ ಮೀ ಎತ್ತರ ೩.೩೬ಮೀ ಅಗಲವನ್ನು ಹೊಂದಿದೆ. ಇವುಗಳ ನಡುವಿನ ಅಂತರ ೫.೭೪ಮೀ ಇದೆ.

ಈ ರೀತಿಯ ನಿಲುವುಗಲ್ಲುಗಳು ಆಂಧ್ರಪ್ರದೇಶದ ಮಿಡಿಮಲ್ಲ,[೪] ದೋಮಾಡ, ತೃತಿಗುಟ್ಟ,[೫] ಡೊಂಡಾಟೋಗು, ಕರ್ನಾಟಕದಲ್ಲಿ ಹಿರೇಬೆಣಕಲ್ಲು ಮಡಿಕೇರಿ ಹತ್ತಿರ ರಾಮಸ್ವಾಮಿ ಕಣಿವೆಗಳಲ್ಲಿ ಹಾಗೂ ಐಹೊಳೆ ನೆಲೆಗಳಲ್ಲಿ ಕಂಡುಬಂದಿವೆ. ಐಹೊಳೆಯ ಗೊಂಬೆಯು ತೀರ ಸಾಂಕೇತಿಕ ಅರ್ಧ ಗೋಳಾಕೃತಿಯಲ್ಲಿ ತಲೆ, ಕಿರಿದಾದ ಕಂಠ ಮುಂಚಾಚಿದ ಮೊಂಡು ಭುಜಗಳು ಮತ್ತು ನೀಳವಾದ ಮುಂಡ, ಬುಡವು ಚೂಪಾಗಿದೆ. ಹಿರೇಬೆಣಕಲ್‌ನ ಬೊಂಬೆ ತಲೆ ದೊಡ್ಡದು ಮೂರನೇ ಎರಡು ಭಾಗವು ಭೂಮಿಯಲ್ಲೆ ಹುಗಿದಿದೆ. ಒಬ್ಬ ಮನುಷ್ಯನು ರಟ್ಟೆಗಳನ್ನು ಅಡ್ಡ ಚಾಚಿ ಕೈಗಳನ್ನು ಮೇಲೆತ್ತಿ ನಿಂತಂತಿದೆ. ಇದು ಒಂದು ಕಲ್ಗೋರಿಬಳಿ ಕಂಡು ಬಂದಿದೆ. ಈ ಬೇರೆ ಕಡೆ ಎಲ್ಲಾ ನೆಲೆಗಳಲ್ಲಿ ಮಾನವಾಕೃತಿ ಶಿಲೆಗಳು ದೊರೆತ್ತಿದ್ದರೂ ಅವುಗಳು ಸ್ಪಷ್ಟವಾಗಿ ಮಾನವಾಕೃತಿಯನ್ನು ಹೋಲುವುದಿಲ್ಲ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಆದರೆ ಹುಲಿಕುಂಟೆ ಮತ್ತು ಕುಮತಿ ನೆಲೆಗಳಲ್ಲಿರುವ ಈ ನಿರ್ಮಿತಿಗಳು ಸ್ಪಷ್ಟವಾಗಿ ಮಾನವಾಕೃತಿಯನ್ನು ಹೋಲುತ್ತವೆ. ಈ ಕುಮತಿಯ ಶಿಲ್ಪಗಳನ್ನು ಬಹುಸೂಕ್ಷ್ಮವಾಗಿ ಗಮನಿಸಿದರೆ ಎಡಭಾಗದಲ್ಲಿರುವ ಶಿಲ್ಪವು ಬಹುಶಃ ಸ್ತ್ರೀಯದು ಇರಬೇಕು ಎಂದೆನಿಸುತ್ತದೆ.ಈ ಶಿಲ್ಪದ ಸೊಂಟಭಾಗ ಸಣ್ಣದಾಗಿದ್ದು, ಅದರ ಕೆಳಗಿನ ಭಾಗ ದಪ್ಪವಾಗಿದೆ. ಬಲ ಭಾಗದ ಶಿಲ್ಪ ಎತ್ತರವಾಗಿದ್ದು, ಸೊಂಟದಭಾಗ ದಪ್ಪವಾಗಿದೆ. ಹೀಗಾಗಿ ಇವು ಸ್ತ್ರೀಪುರುಷ ಮಾನವಾಕೃತಿಗಳಿರಬಹುದಾಗಿದೆ.

ಈ ನಿಲುವುಗಲ್ಲುಗಳ ಬಗ್ಗೆ ಸ್ಥಳೀಯರು ಜನರು ಐತಿಹ್ಯ ಮತ್ತು ದಂತ ಕಥೆಗಳನ್ನು ಹೊಂದಿದ್ದಾರೆ. ರಕಸಕಲ್ಲು, ರಾಕ್ಷಸಗಲ್ಲು, ರಕ್ಕಸಗಲ್ಲು, ರಕ್ಕಿಸಿಕಲ್ಲುಗಳೆಂದು ಈ ಪ್ರದೇಶವನ್ನು ರಕ್ಕಸ ಮಟ್ಟೆ, ರಕ್ಕಿಸಿ ಮಟ್ಟೆಯೆಂದು ಕರೆಯುತ್ತಾರೆ. ಹಾಗೂ ಈ ಬಗ್ಗೆ ಅನಾದಿಕಾಲದಿಂದಲೂ ಜನಪದರಲ್ಲಿ ನಂಬಿಕೆಯ ಹೇಳಿಕೆಯೊಂದು ಉಳಿದುಕೊಂಡುಬಂದಿದೆ.

ಹಿಂದೆ ಶ್ರೀ ಭೈರವೇಶ್ವರ ಎಂಬ ದೇವತಾಪುರುಷನು ಬೇಟೆಗಾಗಿ ಬಂದ ಸಂದರ್ಭದಲ್ಲಿ ರಕ್ಕಸರು ಅಡ್ಡಿಪಡಿಸಿದ್ದರಿಂದ ಅವರನ್ನು ಕಲ್ಲುಗಳಾಗುವಂತೆ ಆ ದೇವತಾ ಪುರುಷನು ಶಾಪ ನೀಡಿದ್ದರಿಂದಾಗಿ ಅವು ಕಲ್ಲುಗಳಾಗಿವೆ ರಾಕ್ಷಸರಿಗೆ ಶಾಪಕೊಟ್ಟಿದ್ದರಿಂದಾಗಿ ಅವು ಕಲ್ಲುಗಳಾಗಿ, ಜನಮಾನದಲ್ಲೂ 'ರಾಕ್ಷಸಕಲ್ಲು' ಎಂಬುದು ಜನರ ನಂಬಿಕೆಯಾಗಿದೆ. ಇವುಗಳ ಬಗ್ಗೆ ಶ್ರೀ

ಅಜ್ಜನಮುನಿ ವಿರಚಿತ ಶ್ರೀ ಕಾಲಭೈರವೇಶ್ವರ ಅರ್ಥಾತ್ ಶ್ರೀ ನುಂಕೇಮಲೆ ಸಿದ್ದೇಶ್ವರ ಎಂಬ ಯಕ್ಷಗಾನ ಬಯಲಾಟದಲ್ಲಿ ಉಲ್ಲೇಖಬರುತ್ತದೆ.[೬]

ಈ ಮಾನವಾಕೃತಿಯ ಶಿಲೆಗಳನ್ನು ಕುರಿತಂತೆ ಡಾ.ಅಸುಂದರ ಅವರು ಕುಮತಿಯ ಗೊಂಬೆಗಳು ಪಂಚಪಾಂಡವರನ್ನು ನಿರ್ದೇಶಿಸುತ್ತವೆ ಎಂದು ಮತ್ತು ಇವುಗಳ ಬಗ್ಗೆ ಮುಂದುವರಿದು ಈ ಗೊಂಬೆಗಳು ಬೃಹತ್ ಶಿಲಾ ಸಂಸ್ಕೃತಿಯ ಧಾರ್ಮಿಕ ನಂಬಿಕೆ, ಭಾವನೆ ಮತ್ತು ಪರಂಪರೆಯನ್ನು ಸೂಚಿಸುವ ಆಕಾರವಾಗಿರುವುದಲ್ಲದೆ ಕರ್ನಾಟಕದ ಮೂರ್ತಿ ಶಿಲ್ಪದ ಪೂರ್ವಭಾವಿ ಹಂತವನ್ನು ಸೂಚಿಸುತ್ತವೆ ಎಂಬ ಅಭಿಪ್ರಾಯದ ಜೊತೆಗೆ ಇದುವರೆಗೂ ಪರಿಶೀಲಿಸಿದ ಬೃಹತ್ ಶಿಲಾಗೋರಿಗಳಿಗಿಂತಲೂ ಅಪರೂಪದ ನಿರ್ಮಿತಿಗಳಾಗಿವೆ ಹಾಗೂ ಆ ಸಮಾಜದ ಜನರು ನಿರ್ಮಾಣ ಕಾರ್ಯಗಳಲ್ಲಿ ಸರಳ ಹಾಗೂ ಚತುರ ಚಾರಿತ್ರಿಕ ಕುಶಲತೆಯನ್ನು ಎತ್ತಿತೋರಿಸುತ್ತದೆ. ಎಂಬ ಅಭಿಪ್ರಾಯ ವ್ಯಕ್ತಪಡಿಸಿರುವುದು ವಿವಿಧ ಅಧ್ಯಯನಗಳಿಂದ ತಿಳಿದುಬರುತ್ತದೆ.[೭]

ಶ್ರೀ ನುಂಕೇಶ್ವರ ದೇವರ ಶಾಪದಿಂದಾಗಿಯೇ ರಾಕ್ಷಸರು ಕಲ್ಲುಗಳಾಗಿ ನಿಂತಿರುವುದು ಸಮಂಜಸವಲ್ಲ ಎಂಬ ಅಭಿಪ್ರಾಯವನ್ನು ಶ್ರೀನಿವಾಸ್.ಎಲ್ ಇವರು ತಮ್ಮ ಹಂಪಿ ಪರಿಸರದ ಆದಿಮಾನವನ ನೆಲೆಗಳು ಎಂಬ ಪುಸ್ತಕದಲ್ಲಿ ಉಲ್ಲೇಖಿಸಿದ್ದಾರೆ. ಕಾರಣ ಶ್ರೀ ನುಂಕೇಮಲೇಶ್ವರ ಮತ್ತು ಮಲ್ಲಿಕಾರ್ಜುನ ಮೊದಲಾದ ದೇವಾಲಯಗಳಿಗೆ ಕಂದಂಬರು ದತ್ತಿ ಬಿಟ್ಟ ಬಗ್ಗೆ ಶಾಸನಗಳು ಮತ್ತು ಕೆಲ ಚರಿತ್ರೆಗಳಿಂದ ತಿಳಿದುಬರುತ್ತದೆ. ಆದ್ದರಿಂದ ಶ್ರೀ ನುಂಕೇಭೈರವೇಶ್ವರ ಕದಂಬರ ಆರಾಧ್ಯದೈವವೆಂದು ತಿಳಿಯುವುದರಿಂದ ಪ್ರಸ್ತುತ ದೇವತಾ ಪುರುಷನ ಶಾಪದಿಂದಾಗಿ ಅಥವಾ ಬಾಣ ಪ್ರಯೋಗದಿಂದ ನಿರ್ಮಾಣವಾಗಿಲ್ಲ ಬದಲಾಗಿ ನುಂಕಪ್ಪ ಬೃಹತ್ ಶಿಲಾಯುಗದ ಕಾಲದ ಪ್ರಮುಖ ನಾಯಕನಾಗಿರಬೇಕು.[೮] ಕುಮತಿ, ಹುಲಿಕುಂಟೆ ಪ್ರದೇಶಗಳಿಗೆ ಆತ ಬೇಟೆಗಾಗಿ ಬಂದಿರಬೇಕು. ಅಲ್ಲಿರುವ ಜನರು ಹೊಸ ಮನಷ್ಯನೊಡನೆ ಹೋರಾಟಕ್ಕೆ ಇಳಿದಿರಬೇಕು. ಪ್ರಾಯಶಃ ಶ್ರೀ ನುಂಕೇಶ್ವರ ಬಹಳ ಬಲಿಷ್ಠನಿದ್ದು, ಈ ಎರಡು ಪ್ರದೇಶಗಳಲ್ಲೂ ತನ್ನ ವಿರುದ್ಧ ಯುದ್ಧಕ್ಕೆ ಬಂದವರನ್ನು ಕೊಂದಿರಬೇಕು. (ಆದಿಮ ಸಮಾಜಗಳಲ್ಲಿ ತಮ್ಮ ಜನರನ್ನು ಹೊರತುಪಡಿಸಿ ಅಂದರೆ ಹೊಸ ಮನುಷ್ಯರು ತಾವಿದ್ದ ಪ್ರದೇಶಕ್ಕೆ ಬಂದರೆ ಅವರೊಡನೆ ಯುದ್ಧಕ್ಕೆ ಇಳಿಯುವುದು ಸಾಮಾನ್ಯವಾಗಿತ್ತು) ಹಾಗಾಗಿ ಅಲ್ಲಿ ಎಷ್ಟು ಜನಸತ್ತರೋ ಅವರೆಲ್ಲರ ಸ್ಮರಣೆಗೆ ಮಾನವಾಕಾರದ ಶಿಲ್ಪಗಳನ್ನು ನಿಲ್ಲಿಸರಬಹುದಾ? ಹಾಗೂ ಅವು ನೋಡಲು ವಿಚಿತ್ರವಾಗಿ ಗೋಚರಿಸುವುದರಿಂದ ಈ ರೀತಿ ಐತಿಹ್ಯವನ್ನು ಜನ ಹುಟ್ಟು ಹಾಕಿರಲಾಯಿತಾ? ಎಂಬ ಪ್ರಶ್ನೆ ಕಾಡುತ್ತದೆ.

ಈ ಮಾನವಾಕೃತಿ ಶಿಲೆಗಳು ದಕ್ಷಿಣ ಭಾರತದ ಇತರೆ ನೆಲೆಗಳಲ್ಲಿ ದೊರೆಯುವ ನಿಲುಸುಗಲ್ಲುಗಳೋಪಾದಿಯಲ್ಲಿದ್ದು, ಇವು ಮಾನವಾಕಾರ ಪಡೆದುಕೊಂಡಿದೆ. ಬೃಹತ್ ಶಿಲಾಯುಗದ ಜನರು ಸತ್ತಾಗ ಸಮಾಧಿ ಮಾಡುವ ವಿಧಾನಗಳಲ್ಲಿ ಇದೊಂದಾಗಿದೆ ಎಂದು ಅಂತಿಮವಾಗಿ ನಿರ್ಧರಿಸಬಹುದು.

ಬಹುಶಃ ಆ ಸಮಾಜದ ಹಿರಿಯಮುಖಂಡ ಸತ್ತಾಗ ಅವನ ನೆನಪಿಗಾಗಿ ಸ್ಮಾರಕವನ್ನು ಅದೇ ಆಕಾರದಲ್ಲಿ ಮಾಡಿ ನಿಲ್ಲಿಸಿರಬೇಕು. ಪ್ರಾಯಶಃ ಅಂದಿನ ಸಮಾಜದ ಧಾರ್ಮಿಕ ನಂಬಿಕೆಗಳಲ್ಲಿ ಇದು ಒಂದಾಗಿರಬಹುದು. ಪ್ರಸ್ತುತ ಈ ಎರಡೂ ನೆಲೆಗಳು ನಿಧಿಗಳ್ಳರ ಅಥವಾ ಕಿಡಿಗೇಡಿಗಳ ಕೈಗೆ ಸಿಕ್ಕು ಹಾಳಾಗುತ್ತಿರುವುದು ಶೋಚನೀಯ ಸಂಗತಿಯಾಗಿದೆ. ಮತ್ತು ಈ ಎರಡು ನೆಲೆಗಳನ್ನು ಉತ್ಖನನ (Excavation) ನಡೆಸಿದಾಗ ಮಾತ್ರ ಮತ್ತಷ್ಟು ಹೊಸ ಅಂಶಗಳು ಬೆಳಕಿಗೆ ಬರುವುದರಲ್ಲಿ ಅನುಮಾನವಿಲ್ಲ. ಹೀಗೆ ಕುಮತಿ ಮತ್ತು ಹುಲಿಕುಂಟೆ ಪ್ರದೇಶದ ಮಾನವಾಕೃತಿ ಶಿಲೆಗಳು ಪ್ರಾಗೈತಿಹಾಸಿಕ ಮಹತ್ವವನ್ನು ಪಡೆದಿವೆ.

### ೪.೧.೫. ಕೈರನ್ ವೃತ್ತಗಳ ಸಮಾಧಿ

ಈ ರೀತಿಯ ಸಮಾಧಿಗಳು ಗುಡೇಕೋಟೆಯ ಸಮೀಪದಲ್ಲಿರುವ ಮಹದೇವಪುರ ಗ್ರಾಮದಲ್ಲಿ ಚಕ್ಕೆ ಕಲ್ಲುಗಳಿಂದ ತುಂಬಿದ್ದ ಕಲ್ಲುವೃತ್ತಗಳ ಸಮಾಧಿಯನ್ನು ವಿದ್ವಾಂಸರು ಪತ್ತೆಹಚ್ಚಿದ್ದಾರೆ.[೯] ಹಾಗೂ ಗಡಿ ತಾಲೂಕಾದ ಮೊಳಕಾಲ್ಮೂರಿನ ಇತರೆ ನೆಲೆಗಳನ್ನು ಈ ರೀತಿಯ ಸಮಾಧಿಗಳು ಕಂಡುಬಂದಿವೆ. ಒಟ್ಟಾರೆಯಾಗಿ ಬೃಹತ್ ಶಿಲಾಯುಗದ ಸಮಾಧಿಗಳನ್ನು ವಿವಿಧ ಪ್ರದೇಶಗಳಲ್ಲಿ ಪ್ರಾದೇಶಿಕವಾಗಿ ಬೇರೆ ಬೇರೆ ಹೆಸರುಗಳಿಂದ ಕರೆಯಲಾಗುತ್ತದೆ ಎಂಬುದು ಅಧ್ಯಯನದಿಂದ ತಿಳಿದುಬರುತ್ತದೆ.

ತಮಿಳುನಾಡಿನ ಕೊಯಮತ್ತೂರುನಲ್ಲಿ ವಾಲಿಕುಡಿಯಿರಪ್ಪ ಅಥವಾ ಕುರಂಗುಪಟ್ಟಾಡೈ ಎಂದು ಕರೆಯಲಾಗಿದೆ. ಕರ್ನಾಟಕದಲ್ಲಿ ಐತಿಹ್ಯಗಳಿಗನುಗುಣವಾಗಿ ವಿವಿಧ ಹೆಸರುಗಳಿಂದ ಕರೆಯಲಾಗಿದೆ.

ತೇರದಾಳ, ಹಳಿಂಗಳಿ, ಕೊಣ್ಣೂರು ಪ್ರದೇಶಗಳಲ್ಲಿ 'ಮುನಿವಾಸಗುಹೆ'ಗಳೆಂದು,[೧೦] ಕೊಡಗಿನ ಘಟ್ಟಪ್ರದೇಶದಲ್ಲಿ ಪಾಂಡವರ ಕಲ್ಲು ಅಥವಾ ಮೊರಿಯರ ಮನೆಗಳೆಂದು ಕರೆಯಲಾಗುತ್ತದೆ. ಕಮಲಾಪುರದಲ್ಲಿ 'ಬಸ್ಮದ ಕಟ್ಟೆಗಳೆಂದು'[೧೧] ಹಾಗೂ ಹಳ್ಳೂರು, ಹಿರೇಬೆಣಕಲ್, ಕೊಪ್ಪಳ, ಹಂಪಿ ಪರಿಸರದಲ್ಲಿ ಮೊರರ ಮನೆ ಎಂದು ಕರೆಯಲಾಗುತ್ತದೆ.

ಅಧ್ಯಯನ ಪ್ರದೇಶದಲ್ಲಿ ಮೊರೆಯರ ಮನೆ, ಮೊರೆಯವರ ಮನೆ ಬೇಟೆಯಾಡುವ ಮನೆಗಳೆಂದು ಹಾಗೂ ಕೂಡ್ಲಿಗಿ ತಾಲೂಕಿನ ಗಡಿ ತಾಲೂಕು ಮೊಳಕಾಲ್ಮೂರು ತಾಲೂಕಿನ ಹಾನ್‌ಗಲ್‌ನಲ್ಲಿ ಮೊರ್ಲೂಬಂಡೆ ಎಂದು ಕರೆಯಲಾಗುತ್ತದೆ.[೧೨] ಇದರಿಂದ ಪ್ರಾದೇಶಿಕ ಭಿನ್ನತೆಯನ್ನು ಗುರುತಿಸಲಬಹುದಾಗಿದೆ.

### ೪.೨. ಮೃತ್ಪಾತ್ರೆಗಳು

ಬೃಹತ್ ಶಿಲಾಯುಗದ ಮಾನವನ ಜೀವನ ಕ್ರಮವನ್ನು ತಿಳಿಯಲು ಮೃತ್ಪಾತ್ರೆಗಳು ಪ್ರಮುಖ ಆಕಾರಗಳಾಗಿ ಕಂಡುಬರುತ್ತವೆ. ಇವುಗಳ ಆಕಾರ ಮತ್ತು ರಚನಾ ವಿನ್ಯಾಸದಿಂದ ಅಂದಿನ ಸಮಾಜದ ಸ್ಥಿತಿಗತಿಯನ್ನು ತಿಳಿಯಬಹುದು. ನಿಧಾನವಾಗಿ ತಿರುಗುವ ಚಕ್ರದ ಸಹಾಯದಿಂದ

ಮೃತ್ಪಾತ್ರೆಗಳನ್ನು ತಯಾರಿಸುವ ತಂತ್ರಗಾರಿಕೆ ಪಡೆದಿದ್ದರು. ಬೃಹತ್ ಶಿಲಾಯುಗದ ಮೃತ್ಪಾತ್ರೆಗಳು ಸಾಮಾನ್ಯವಾಗಿ ಕಪ್ಪು ಮತ್ತು ಕೆಂಪು ವರ್ಣದ ಮೃತ್ಪಾತ್ರೆಗಳೆಂದು (Black and Redwere) ಎಂದು ಗುರುತಿಸಲಾಗಿದೆ.

ಈ ಪಾತ್ರೆಗೆ ಇಂತಹ ವರ್ಣಬರಲು ಮುಖ್ಯಕಾರಣವೆಂದರೆ ಅದನ್ನು ಸುಡುವ ಕಾಲದಲ್ಲಿ ಒಂದರ ಮೇಲೆ ಒಂದರಂತೆ ಇಟ್ಟು ಸುಡಲಾಗುತ್ತದೆ. (Open air Reduction technique) ಇದರಿಂದಾಗಿ ಪಾತ್ರೆಗಳಿಗೆ ಕಪ್ಪು ಮತ್ತು ಕೆಂಪು ವರ್ಣವು ಮೂಡಿರುತ್ತದೆ. ಈ ರೀತಿಯ ಮಡಿಕೆಗಳು (ಮೃತ್ಪಾತ್ರೆಗಳು) ಅಧ್ಯಯನ ಪ್ರದೇಶದ ವಿವಿಧ ನೆಲೆಗಳಲ್ಲಿ ಕಂಡು ಬಂದಿವೆ. ಮತ್ತು ಇತರೆ ಕಾಲಘಟ್ಟಕ್ಕೆ ಸಂಬಂಧಿಸಿದ ಮೃತ್ಪಾತ್ರೆಗಳ ಅಧ್ಯಯನ ಪ್ರದೇಶದಲ್ಲಿ ದೊರಕಿವೆ. ಅವುಗಳನ್ನು ಅಧ್ಯಯನ ದೃಷ್ಟಿಯಿಂದ ನಾಲ್ಕು ವಿಭಾಗಗಳಾಗಿ ವಿಂಗಡಿಸಿ ಕೊಳ್ಳಲಾಗಿದೆ.

೪.೨.೧ ಕೆಂಪು ಲೇಪನದಡಿಯಲ್ಲಿ ಬಿಳಿವರ್ಣ ಚಿತ್ರವುಳ್ಳ ಕಪ್ಪು ಕೆಂಪುವರ್ಣದ ಮೃತ್ಪಾತ್ರೆಗಳು

೪.೨.೨ ಕೆಂಪು ವರ್ಣದ ಮೃತ್ಪಾತ್ರೆಗಳು

೪.೨.೩ ರೂಲೆ ಮೃತ್ಪಾತ್ರೆಗಳು

೪.೨.೪ ರಸೆಟ್ಟಾ ಲೇಪಿತ ಮೃತ್ಪಾತ್ರೆಗಳು

**೪.೨.೧ ಕೆಂಪು ಲೇಪನದಡಿಯಲ್ಲಿ ಬಿಳಿವರ್ಣ ಚಿತ್ರವುಳ್ಳ ಕಪ್ಪು ಕೆಂಪುವರ್ಣದ ಮೃತ್ಪಾತ್ರೆಗಳು**

ಈ ರೀತಿಯ ಮೃತ್ಪಾತ್ರೆಗಳನ್ನು ಸುಡುವಾಗ ತಲೆಕೆಳಗಾಗಿ ಅಥವಾ ಬೋರಲಾಗಿ ಜೋಡಿಸಿ, ನಿಯಮಿತ ಪ್ರಮಾಣದಲ್ಲಿ ಇಟ್ಟು ಸುಟ್ಟಿರುವುದರಿಂದ ಗಾಳಿಗೆ ತೆರದ ಬುಡದ ಹೊರಭಾಗವು ಕೆಂಪಾಗಿಯೂ ಹಾಗೂ ಮುಚ್ಚಿದ ಒಳಭಾಗವು ಕಪ್ಪು ವರ್ಣವನ್ನು ಪಡೆಯುತ್ತಿತ್ತು. ಹೀಗೆ ಎರಡು ರೀತಿಯಾಗಿ ಮೃತ್ಪಾತ್ರೆಗಳು ರೂಪುಗೊಂಡಿರುವುದು ತಿಳಿದುಬರುತ್ತದೆ. ಅದೇ ರೀತಿ ಸುಡುವ ಮೊದಲು ವಿವಿಧ ಅಲಂಕಾರಿಕ ಚಿತ್ರಗಳನ್ನು ಬಿಡಿಸಿ ತೆಳ್ಳನೆಯ ಲೇಪನವನ್ನು ನೀಡಿ ಹೊಳಪುಬರುವಂತೆ ರೂಪಿಸಲಾಗುತ್ತಿತ್ತು.

ಸಮಾನಾಂತರ ಓರೆ, ನೇರ, ಅಡ್ಡಲಾಗಿರುವ ಸಣ್ಣಗೆರೆಗಳು ಪರಸ್ಪರ ಕತ್ತರಿಸುವ ಗೆರೆಗಳು, ಅಲೆಯಾಕಾರದ ಗೆರೆಗಳು, ಸಣ್ಣಚಕ್ಕೆಗಳಿಂದ ಕೂಡಿದ ತ್ರಿಭುಜ ಮುಂತಾದ ಅಲಂಕರಣವಿರುವ ಹೊರಮೈ ಕಪ್ಪು ಕೆಂಪು ಬಣ್ಣಗಳ ಮಿಶ್ರಣ ಹಾಗೂ ಒಳಮೈ ಸಂಪೂರ್ಣ ಕಪ್ಪಾಗಿದ್ದು, ಚಕ್ರದ ಸಹಾಯದಿಂದ ತಯಾರಿಸಲಾಗುತಿತ್ತು.[೧೩]

ಅಧ್ಯಯನ ಪ್ರದೇಶದಲ್ಲಿ ಕಲ್ಲಹಳ್ಳಿ ನೆಲೆಯಲ್ಲಿ ದೊರೆತ ಕಪ್ಪು-ಕೆಂಪು ಮಡಿಕೆಗಳಲ್ಲಿದೆ ಬಿಳಿವರ್ಣದ ಚಿತ್ರಗಳಿವೆ. ಈ ರೀತಿಯ ಮಡಿಕೆಗಳು ಮೂಲತಃ ಶಿಲಾ ತಾಮ್ರಯುಗದಿಂದ ಆರಂಭವಾಗಿ ಬೃಹತ್ ಶಿಲಾಸಂಸ್ಕೃತಿಯಲ್ಲಿ ಹೆಚ್ಚು ವೈವಿಧ್ಯತೆಯನ್ನು ಪಡೆದವು ನಂತರ ಈ

ಕಪ್ಪು ಕೆಂಪು ದ್ವಿವರ್ಣದ ಮಡಿಕೆಗಳು ವಿಶಿಷ್ಟ ಅಲಂಕಾರವನ್ನು ಪಡೆದು ಆದಿ ಇತಿಹಾಸ ಕಾಲದಲ್ಲಿಯು ಮುಂದುವರೆದವು ಎಂದು ಹೇಳಬಹುದು.

### ೪.೨.೨ ಕೆಂಪು ವರ್ಣದ ಮೃತ್ಪಾತ್ರೆಗಳು

ಈ ರೀತಿಯ ಮೃತ್ಪಾತ್ರೆಗಳನ್ನು ಬಣ್ಣದ ಲೇಪನ ಕೊಟ್ಟು ಹೆಚ್ಚು ಉಷ್ಣತೆಯಲ್ಲಿ ಸುಡಲಾಗಿರುವುದರಿಂದ ಕೆಂಪು ವರ್ಣದ ಹೊಳಪುಳ್ಳ ಮೃತ್ಪಾತ್ರೆಗಳು ಕಡುಗೆಂಪು ಮತ್ತು ತೆಳುಗೆಂಪಿನವರೆಗೆ ವಿವಿಧ ವರ್ಣಗಳಾಗಿ ರೂಪಗೋಂಡಿರುವುದು ತಿಳಿದುಬರುತ್ತದೆ.

ಬೃಹತ್ ಶಿಲಾಯುಗದ ಆಕೃತಿಗಳೆಲ್ಲಾ ಈ ಹಂತದಲ್ಲಿ ಮುಂದುವರೆದಿದ್ದು ಚಕ್ರದಿಂದ ತಯಾರಿಸಿದ ಕಿರಿ ಹಾಗೂ ಮಧ್ಯಮ ಗಾತ್ರದ ಕುಂಭಗಳು, ಕುಡಿಕೆಗಳು, ಎತ್ತರದ ಜಾಡಿಗಳು, ನೀರಿನ ಬಾನಿಗಳಲ್ಲದೆ, ಧಾನ್ಯ ಸಂಗ್ರಹಣ ಪಾತ್ರೆಗಳು ಪ್ರಮುಖವಾದವು.[೧೪] ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕುಮತಿ, ಕಲ್ಲಹಳ್ಳಿಯಲ್ಲಿ ಈ ಸಂಸ್ಕೃತಿಯ ಕೆಂಪುವರ್ಣದ ಮೃತ್ಪಾತ್ರೆಗಳು ದೊರೆತಿವೆ. ಅಲ್ಲದೆ ಗುಡೇಕೋಟೆಯಲ್ಲಿ ಈ ಸಂಸ್ಕೃತಿಯ ಕಪ್ಪು ಕೆಂಪು ವರ್ಣದ ಮಡಿಕೆಗಳು ಹಾಗೂ ಕೆಂಪು ವರ್ಣದ ಮಟಿಕೆಗಳು ದೊರಕಿದ್ದು ಅವುಗಳಲ್ಲಿ ಹೋರಿಯ ಕೊಂಬಿನ ಆಕೃತಿ ಮತ್ತು ವೃತ್ತಾಕಾರದ ಮಕ್ಕಳ ಆಟಿಕೆಗಳು ವಿಶೇಷವಾಗಿ ಕಂಡುಬಂದಿವೆ.[೧೫]

### ೪.೨.೩ ರೂಲೆ ಮೃತ್ಪಾತ್ರೆಗಳು

ರೋಮ್‌ನೊಂದಿಗೆ ವಾಣಿಜ್ಯ ಸಂಪರ್ಕಹೊಂದಿರುವ ಭಾರತದ ನೆಲೆಗಳಲ್ಲಿ ತಟ್ಟೆಯಂತೆ ಹೆಚ್ಚು ಅಗಲ ಹಾಗೂ ಕಡಿಮೆ ಎತ್ತರವಿರುವ ಮೃತ್ಪಾತ್ರೆಗಳು ವಿರಳವಾಗಿ (ಕಡಿಮೆ ಪ್ರಮಾಣದಲ್ಲಿ) ಬೇರೆ ಬೇರೆ ನೆಲೆಗಳಲ್ಲಿ ದೊರಕಿವೆ. ರೋಮ್‌ನಿಂದ ಆಮದುಗೊಂಡಿರುವ ಈ ಮಡಿಕೆಗಳು ಕಪ್ಪು-ಮಿಶ್ರಿತ ಬೂದುವರ್ಣದಲ್ಲಿರುತ್ತದೆ.[೧೬] ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಈ ರೀತಿಯ ಮೃತ್ಪಾತ್ರೆಗಳು ಎಲ್ಲಿಯೂ ಕಂಡುಬಂದಿಲ್ಲ.

### ೪.೨.೪ ರಸೆಟ್ಟಾ ಲೇಪಿತ ಮೃತ್ಪಾತ್ರೆಗಳು

ಈ ಮೃತ್ಪಾತ್ರೆಗಳನ್ನು ಆಂದ್ರಮೃತ್ಪಾತ್ರೆಗಳು ಅಥವಾ ಶಾತವಾಹನ ಕಾಲದ ಮೃತ್ಪಾತ್ರೆಗಳೆಂದು ಕರೆಯಲಾಗುತ್ತದೆ.[೧೭] ಇವುಗಳು ಬೃಹತ್ ಶಿಲಾಯುಗ ಸಂಸ್ಕೃತಿಯ ಮಡಿಕೆಗಳಿಗಿಂತ ತಾಂತ್ರಿಕವಾಗಿ ಭಿನ್ನವಾದವುಗಳಾಗಿವೆ ಇವು ಆದಿ ಇತಹಾಸಕಾಲದಲ್ಲಿ ವೇಗವಾಗಿ ತಿರುಗುವ ಚಕ್ರದಿಂದ ತಯಾರಿಸಲಾಗಿದೆ. ಇವುಗಳಿಗೆ ಸುಣ್ಣದ ನೀರು ಅಥವಾ ಕಯೋಲಿನ್ ಮಿಶ್ರಣದ ತಿಳಿಯನ್ನು ಲೇಪಿಸುವ ಮೊದಲಿಗೆ ಒಂದನ್ನೊಂದು ಛೇದಿಸುವ ಅಡ್ಡಗೆರೆಗಳು, ಅಡ್ಡಗೆರೆಯ ಸಾಲುಗಳು ಸರಳವಾದ ಅಡ್ಡಗೆರೆಗಳ ವಿನ್ಯಾಸ, ಚಕ್ಕೆಗಳಿಂದ ಸಾಲುಗಳು, ಹೊಳಪಿನ ಗೆರೆಗಳನ್ನು ಮಾಡಿಸಲಾಗುತ್ತಿತ್ತು. ಒಂದನ್ನೊಂದು ಛೇದಿಸುವ ಅಡ್ಡಗೆರೆಗಳನ್ನು ಹೆಚ್ಚಾಗಿ ಬಿಳಿವರ್ಣದಿಂದ ಚಿತ್ರಿಸಿ, ಅವುಗಳು ಒಣಗಿದ ನಂತರ ಕಂದು ಬಣ್ಣದ ಲೇಪನವನ್ನು ಹಚ್ಚಿ ಸುಡಲಾಗುತ್ತಿತ್ತು.

ಈ ಅಲಂಕರಣ ಕೆಂಪು ಬಣ್ಣದ ಮೃತ್ಪಾತ್ರೆಗಳಲ್ಲಿ ಹೆಚ್ಚಾಗಿದ್ದು ಕಪ್ಪು ಮತ್ತು ಕೆಂಪು ವರ್ಣದ ಮೃತ್ಪಾತ್ರೆಗಳಲ್ಲಿಯು ಸಹ ಈ ಅಲಂಕಾರ ಕಂಡುಬರುತ್ತದೆ. ಕಪ್ಪು ಮತ್ತು ಕೆಂಪುವರ್ಣದ ಮೃತ್ಪಾತ್ರೆಗಳನ್ನು ಬೋರಲು ಇಟ್ಟು ಸುಡುವುದರಿಂದ ಒಳಗಡೆ ಕಪ್ಪಾಗಿದ್ದು ಹೊರಮೈಯಲ್ಲಿ ಕಪ್ಪು ಮತ್ತು ಕೆಂಪು ವರ್ಣ ಉಂಟಾಗಿದೆ. ಈ ರೀತಿಯ ಮೃತ್ಪಾತ್ರೆಗಳು ಅಧ್ಯಯನ ಕ್ಷೇತ್ರವಾದ ಕಲ್ಲಹಳ್ಳಿ, ಸುಣ್ಣಮರಡಿ ನೆಲೆಗಳಲ್ಲಿ ದೊರಕಿವೆ.

ಒಟ್ಟಾರೆಯಾಗಿ ದಖ್ಖನ್ ಮತ್ತು ದಕ್ಷಿಣ ಭಾರತದ ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಗಳಲ್ಲಿ ದೊರೆತ ಕಪ್ಪು ಬಣ್ಣದ ಮಡಿಕೆಗಳನ್ನು ಉತ್ತರಭಾರತದಲ್ಲಿ ದೊರೆತ ಈ ಸಂಸ್ಕೃತಿಯ ಕಪ್ಪು ಬಣ್ಣದ ಮಡಿಕೆಗಳಿಗೆ ಹೋಲಿಕೆ ಮಾಡಿದ್ದು ಅವುಗಳನ್ನು ಸುಲಭವಾಗಿ ಪ್ರತ್ಯೇಕಿಸಬಹುದು.

ಉತ್ತರ ಭಾರತದ ಕಪ್ಪು ಮಡಿಕೆಗಳನ್ನು ವೇಗವಾಗಿ ತಿರುಗುವ ಚಕ್ರದಿಂದ ತಯಾರಿಸಿ ಚೆನ್ನಾಗಿ ಸುಟ್ಟು ಉತ್ತಮವಾಗಿ ನಯಗೊಳಿಸಿ ಲೋಹದ ಮೆರಗನ್ನು ನೀಡಲಾಗಿದೆ. ಆದರೆ ಇಲ್ಲಿನ ಮಡಿಕೆಗಳನ್ನು ನುಣುಪಿಲ್ಲದ ಒರಟಾದ ಜೇಡಿಮಣ್ಣಿನಿಂದ ನಿಧಾನವಾಗಿ ತಿರುಗುವ ಚಕ್ರದಿಂದ ತಯಾರಿಸಿದ್ದು ಒರಟಾಗಿ ಅದಮಾಡಲಾಗಿದೆ. ಎಂದು ಹೇಳಬಹುದು.

**೪. ೩ ಕಬ್ಬಿಣದ ಅವಶೇಷಗಳು**

ಕೂಡ್ಲಿಗಿ ತಾಲೂಕು ಪರಿಸರದಲ್ಲಿ ಕಬ್ಬಿಣದ ಕಿಟ್ಟ ಅವಶೇಷಗಳು ಹಲವು ಕಡೆಗಳಲ್ಲಿ ಕಂಡು ಬಂದಿವೆ. ಈ ತಾಲೂಕಿನಲ್ಲಿ ಈವರೆಗೆ ಹುರುಳಿಯಾಳ್, ತಿಮ್ಮವ್ವನಹಳ್ಳಿ, ಓಬಳಾಪುರ, ಗುಡೇಕೋಟೆ ಮೊದಲಾದ ನೆಲೆಗಳಲ್ಲಿ ಪುರಾತನ ಕುಲುಮೆ ಅವಶೇಷಗಳು ದೊರೆತಿವೆ. ಇವುಗಳ ನಿರ್ಮಾಣದ ಕುರಿತು ಖಚಿತವಾಗಿ ತಿಳಿದು ಬಂದಿಲ್ಲ ಆದರೆ ಇವುಗಳ ಲಕ್ಷಣಗಳನ್ನು ಆದರಿಸಿ ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಪ್ರಾಚೀನ ಕಾಲದಲ್ಲಿ ಕುಲುಮೆಗಳನ್ನು ೩ ರಿಂದ ೪ ಅಡಿ ವ್ಯಾಸದ ಅಷ್ಟೇ ಎತ್ತರವಿದ್ದ ಕುಲುಮೆಗಳು ಬಳಕೆಯಲ್ಲಿದ್ದವು. ಈ ಕುಲುಮೆಗಳನ್ನು ಜೇಡಿಮಣ್ಣಿನಿಂದ ಕೊಳವೆಗಳನ್ನು ತಯಾರಿಸಿ ಅದಕ್ಕೆ ತಿದ್ದಿಗಳನ್ನು ಜೋಡಿಸಲಾಗುತ್ತಿತ್ತು. ಸಾಮಾನ್ಯವಾಗಿ ಈ ಕುಲುಮೆಗಳು ೪ ರಿಂದ ೫ ಗಂಟೆಗಳ ಕೆಲಸ ನಿರ್ವಹಿಸುತ್ತಿದ್ದವು. ತಿದ್ದಿಯಲ್ಲಿ ಒತ್ತಿದ ಗಾಳಿ ಕಬ್ಬಿಣ ಕರಗಲು ಬೇಕಾದ ಉಷ್ಣತೆಯನ್ನು ಕಾಯ್ದುಕೊಳ್ಳಲು ನೆರವಾಗುತ್ತಿತ್ತು.[೮] ಇದ್ದಿಲನ್ನು ಶಾಖದ ಮೂಲವಾಗಿ ಬಳಸುತ್ತಿದ್ದರು. ಎಂಬುದು ವಿವಿಧ ಅಧ್ಯಯನಗಳಿಂದ ತಿಳಿದು ಬರುತ್ತದೆ.

**ಕುಲುಮೆಯಿಂದ ಕಬ್ಬಿಣ ಪಡೆಯುವ ವಿಧಾನ**

ಬೆಟ್ಟಗುಡ್ಡಗಳಿಂದ ಸಂಗ್ರಹಿಸಿದ ಅದಿರನ್ನು ತಂದು ಆರಿಸಿ ಜಾಲಾಡಿ ಲೋಹದ ಖನಿಜವುಳ್ಳ ಅದಿರನ್ನು ಸಾಂದ್ರೀಕರಿಸುತ್ತಿದ್ದರು. ಆ ಮೇಲೆ ಸಿಕ್ಕಲೋಹದ ಅಂಶವುಳ್ಳ ಅದಿರನ್ನು ಕುಲುಮೆಗೆ

ಸ್ಥಳಾಂತರ ಮಾಡುತ್ತಿದ್ದರು. ಕೆಳಭಾಗದಿಂದ ಇಂಧನವಾಗಿ ಇದ್ದಿಲನ್ನು ತುಂಬಿ, ಕೆಂಡ ಮಾಡಿ ಕುಲುಮೆಯನ್ನು ಸಿದ್ಧಪಡಿಸಿಕೊಳ್ಳುತ್ತಿದ್ದರು. ಅನಂತರ ಪದರ ಪದರವಾಗಿ ಅದಿರು ಮತ್ತು ಇದ್ದಿಲನ್ನು ತುಂಬುತ್ತಿದ್ದರು. ಕುಲುಮೆಗೆ ಅಳವಡಿಸಿದ ತಿದ್ದಿಗಳನ್ನು ಸತತವಾಗಿ ಒತ್ತಿ ಒತ್ತಡದ ಗಾಳಿಯನ್ನು ಕುಲುಮೆಯೊಳಗೆ ಬಿಡುತ್ತಿದ್ದರು. ಇದರಿಂದ ಹೆಚ್ಚಿನ ಶಾಖ ದೊರೆತು ಲೋಹವು ಅದಿರಿನಿಂದ ಬೇರ್ಪಟ್ಟು ದ್ರವೀಕರಣಗೊಳ್ಳುತ್ತಿತ್ತು. ಹಗುರವಾದ ಲೋಹವನ್ನು ಕುಲುಮೆಯ ಕೆಳಭಾಗದಲ್ಲಿ ಮುಚ್ಚಿದ್ದ ಕಂಡಿಯನ್ನು ತೆಗೆಯುವುದರ ಮೂಲಕ ಹೊರಗೆ ಬಿಡುತ್ತಿದ್ದರು. ಹೀಗೆ ತಯಾರಾದ ಕಬ್ಬಿಣವು ಅಶುದ್ಧವಾಗಿತ್ತು. ಈ ಅಶುದ್ಧ ಕಬ್ಬಿಣವನ್ನು ಮತ್ತೆ ಕರಗಿಸಿದಾಗ ಶುದ್ಧರೂಪಕ್ಕೆ ಬರುತ್ತಿತ್ತು. ತದ ನಂತರ ಅದನ್ನು ಹಚ್ಚುಗಳಿಗೆ ಹಾಕಿ ತಮಗೆ ಬೇಕಾದ ಆಕೃತಿಗಳನ್ನು ಪಡೆಯುತ್ತಿದ್ದರಬೇಕು. ಹೀಗೆ ಅಶುದ್ಧವಾಗಿ ಉಳಿದ ದ್ರವ ರೂಪದ ಲೋಹವೇ ಕಿಟ್ಟ ವಾಗಿ ಪರಿಣಮಿಸಿತು. ಈ ರೀತಿಯಾಗಿ ಕಬ್ಬಿಣವನ್ನು ತಯಾರಿಸುವ ತಂತ್ರಜ್ಞಾನ ಬೃಹತ್ ಶಿಲಾಯುಗದ ವೇಳೆಗೆ ಬಳಕೆಗೆ ಬಂದಿರಬಹುದೆಂದು ತಿಳಿಯಲಾಗಿದೆ.[೧೯]

ಇಂತಹ ಕಬ್ಬಿಣ ತಯಾರಿಸುವ ಘಟಕಗಳು ಕರ್ನಾಟಕದಲ್ಲಿ ಕಬ್ಬಿಣದ ಅದಿರಿನ ನಿಕ್ಷೇಪ ಇರುವಲ್ಲಿ ಕಂಡು ಬಂದಿವೆ. ಬಳ್ಳಾರಿ, ಚಿತ್ರದುರ್ಗ, ದಾವಣಗೆರೆ, ರಾಯಚೂರು, ದಾರವಾಡ, ಮುಂತಾದ ಸ್ಥಳಗಳಲ್ಲಿ ಈ ರೀತಿಯ ಅವಶೇಷಗಳು ಕಂಡು ಬಂದಿವೆ. ಬಳ್ಳಾರಿ ಜಿಲ್ಲೆಯ ಸಂಡೂರು ಪ್ರದೇಶವು ಪ್ರಾಚೀನ ಕಾಲದಲ್ಲಿ ಲೋಹ ತಯಾರಿಕ ಕೇಂದ್ರವಾಗಿತ್ತು ಎಂಬುದು ಗಮನಾರ್ಹ ಸಂಗತಿಯಾಗಿದೆ. ಇದೇ ರೀತಿ ಜಿಲ್ಲೆಯ ಕುಡುತಿನಿ, ಲಿಂಗನಬಂಡಿ, ಗೊಲ್ಲರಹಳ್ಳಿ, ನಂದಿಬಂಡಿ, ಚಿಲಕನಹಟ್ಟಿ, ಇಂಗಳದಾಳ್, ಕಮಲಾಪುರ ಮುಂತಾದ ಕಡೆಗಳಲ್ಲಿ ಕಬ್ಬಿಣ ತಯಾರಿಸುವ ಘಟಕಗಳನ್ನು ತರೆಯಾಗಿತ್ತು, ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೨೦]

ಪ್ರಸ್ತುತ ಅಧ್ಯಯನ ಪ್ರದೇಶವಾದ ಕೂಡ್ಲಿಗಿ ತಾಲೂಕಿನ ನೆಲೆಗಳಲ್ಲೂ ಕಬ್ಬಿಣದ ಕುಲುಮೆ ಅವಶೇಷಗಳು ಕಂಡುಬಂದಿವೆ. ತಾಲೂಕಿನ ಹುರುಳಿಯಾಳ್ ಗ್ರಾಮದಿಂದ ಮೀನಕೆರೆಗೆ ಹೋಗುವ ಮಾರ್ಗದಲ್ಲಿ ೧.ಕಿ.ಮೀ ಸಾಗಿದರೆ ಎಡಗಡೆ ರಸ್ತೆಪಕ್ಕದ ಜಮೀನಿನಲ್ಲಿ ಸುಮಾರು ೧೦ ಲೋಡ್‌ನಷ್ಟು ಕಬ್ಬಿಣದ ಕಿಟ್ಟದರಾಶಿ ಮತ್ತು ಕುಲುಮೆಯ ಅವಶೇಷಗಳಾದ ಮೂಸೆಗಳು, ಮಡಿಕೆಚೂರುಗಳು ಕರಕಲು ಮಣ್ಣಿನಲ್ಲಿ ದೊರೆತಿವೆ.

ಸುಮಾರು ಒಂದು ಎಕರೆ ಜಮೀನಿನಲ್ಲಿ ಹರಡಿ ಕೊಂಡಿರುವ ಕಿಟ್ಟದರಾಶಿ ಮತ್ತು ಕುಲುಮೆ ಅವಶೇಷಗಳ ಬಗ್ಗೆ ವೈಜ್ಞಾನಿಕ ವಿಶ್ಲೇಷಣೆ ಆಗಬೇಕಾಗಿದೆ. ಆಗ ಮಾತ್ರ ಇವುಗಳ ಮೂಲವನ್ನು ಖಚಿತವಾಗಿ ತಿಳಿಯಲು ಸಾಧ್ಯ. ಇದೇ ರೀತಿಯಾಗಿ ಹುರುಳಿಯಾಳ್ ಗ್ರಾಮದ ಸಮೀಪದಲ್ಲಿರುವ ತಿಮ್ಮಪ್ಪನಹಳ್ಳಿಯಲ್ಲಿ ಕಿಟ್ಟದರಾಶಿ ಕುಲುಮೆ ಮತ್ತು ಮಣ್ಣಿನಿಂದ ತಯಾರಿಸಿರುವ ಮೂಸೆ ಕಂಡುಬಂದಿವೆ. ಹಾಗೂ ಓಬಳಾಪುರ, ಚಕ್ಕೆ ಮಂಡಿ ನೆಲೆಗಳಲ್ಲೂ ಸಹ ಈ ರೀತಿಯ ಕುರುಹುಗಳು ದೊರೆತಿವೆ. ಈ ಎಲ್ಲಾ ನೆಲೆಗಳಲ್ಲಿ ಹೇರಳವಾಗಿ ಕಿಟ್ಟದ ರಾಶಿಯು ಹೇರಳವಾಗಿ ಕಂಡುಬಂದಿರುವುದನ್ನು

ಗಮನಿಸಿದರೆ ಕಬ್ಬಿಣವನ್ನು ಶುದ್ಧರೂಪಕ್ಕೆ ತರಲು ಸಾಕಷ್ಟು ಕಚ್ಚ ಅದಿರನ್ನು ಸಂಗ್ರಹಿಸಿ ಬಳಸುತ್ತಿದ್ದರೆಂದು ಊಹಿಸಬಹುದು. ಒಟ್ಟಿನಲ್ಲಿ ಕೂಡ್ಲಿಗಿ ತಾಲೂಕಿನಲ್ಲಿ ಕಂಡು ಬರುವ ಕುಲುಮೆ ಅವಶೇಷಗಳಿಂದ ಈ ಪ್ರದೇಶದಲ್ಲಿ ಕಬ್ಬಿಣ ಉತ್ಪಾದನಾ ಘಟಕಗಳನ್ನು ತರೆಯಲಾಗಿತ್ತು ಎಂಬುದನ್ನು ಖಚಿತವಾಗಿ ನಿರ್ಧರಿಸಬಹುದು. ಹಾಗೂ ಕಬ್ಬಿಣ ತಯಾರಿಸುವ ಪರಿಣಿತಿ ಹೊಂದಿದ ಜನಸಮುದಾಯ ಈ ಪ್ರದೇಶದಲ್ಲಿ ವಾಸವಾಗಿತ್ತು ಎಂಬ ಮಹತ್ವದ ಅಂಶ ಬೆಳಕಿಗೆ ಬರುತ್ತದೆ. ಇದಕ್ಕೆ ಪೂರಕವೆನ್ನುವಂತೆ ಇಂದಿಗೂ ಸಹ ಕಬ್ಬಿಣದ ಕೆಲಸಮಾಡುವವರನ್ನು ಕಮ್ಮಾರರೆಂದು ಕರೆಯಲಾಗುತ್ತದೆ.

ಇಲ್ಲಿ ತಯಾರಿಸಿದ ಕಬ್ಬಿಣವನ್ನು ಬೇರೆ ಕಡೆ ಸಾಗಿಸುತ್ತಿದ್ದರಬೇಕು ಇಲ್ಲವೆ ಕಬ್ಬಿಣದ ಆಯುಧೋಪಕರಣಗಳ ಬಳಕೆ ಅವಶ್ಯಕವಾಗಿತ್ತು ಎಂಬುದನ್ನು ತಿಳಿದುಬರುತ್ತದೆ. ಆದರೆ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕಬ್ಬಿಣದ ಆಯುಧವು ಇದುವರೆಗೆ ಒಂದೂ ದೊರಕಿಲ್ಲ. ಆದರೂ ಈ ಪ್ರದೇಶದ ಸಮೀಪದಲ್ಲಿ ಕಬ್ಬಿಣದ ಅದಿರಿನ ನಿಕ್ಷೇಪಗಳು ಸಂಡೂರು ಬೆಟ್ಟದಲ್ಲಿ ಹೇರಳವಾಗಿರುವುದರಿಂದ ಬಹುಶಃ ಅಲ್ಲಿಂದ ಇಲ್ಲಿಗೆ ಅದಿರನ್ನು ತಂದು ಕಬ್ಬಿಣ ಉತ್ಪಾದನೆ ಮಾಡಲಾಗುತ್ತಿತ್ತೆಂಬ ಸಂಶಯ ಮೂಡುತ್ತದೆ. ಇಲ್ಲವೆ ಇಲ್ಲಿನ ಬೆಟ್ಟಗಳಲ್ಲಿ ಅಲ್ಪ ಪ್ರಮಾಣದಲ್ಲಿ ದೊರೆಯುವ ಕಚ್ಚಾ ಅದಿರನ್ನು ತಂದು ಕಬ್ಬಿಣವನ್ನು ತಯಾರಿಸಿರುವ ಸಾಧ್ಯತೆ.

### ೪.೪ ಇತರೆ ಅವಶೇಷಗಳು

ಪ್ರಾಗ್ಯೈತಿಹಾಸಿಕ ಕಾಲದ ಮಾನವ ಕಲಾ ಸೃಷ್ಟಿಯ ಆರಂಭದ ವ್ಯಕ್ತಿಯಾಗಿದ್ದಾನೆ. ಆದಿ ಮಾನವ ತನ್ನ ಸಂತೋಷ, ದುಃಖ ಭಾವನೆಗಳನ್ನು ವ್ಯಕ್ತಪಡಿಸುವ ಸಲುವಾಗಿ ತಾನಿರುವ ಗುಹೆಗಳ ಶಿಲಾಶ್ರಯಗಳ ಗೋಡೆಗಳ, ಭಾವನೆಗಳಲ್ಲಿ ತನ್ನ ಸುತ್ತಲಿನ ಪರಿಸರವನ್ನು ತಾನು ಕಂಡ ಹಾಗೆ ಗೀಚತೊಡಗಿದ. ಇದೇ ಕ್ರಮೇಣ ಚಿತ್ರ ರಚನೆಗೆ ಮೂಲ ಪ್ರೇರಣೆಯಾಯಿತು. ಆಹಾರಕ್ಕಾಗಿ ಭೇಟೆಯನ್ನು ಕಸುಬು ಮಾಡಿಕೊಂಡಿದ್ದ, ಶಿಲಾಯುಗದ ಮಾನವನಿಗೆ ಅವನ ಅನುಭವ ಚಟುವಟಿಕೆಗಳೇ ಅವನು ಚಿತ್ರಗಳಿಗೆ ವಸ್ತುವಾದವು. ಪ್ರಪಂಚದ ಹಲವಾರು ಭಾಗಗಳಲ್ಲಿ ಪ್ರಾಗ್ಯೈತಿಹಾಸಿಕ ಮತ್ತು ಇತಿಹಾಸ ಕಾಲದ ಗವಿಚಿತ್ರಗಳು, ವರ್ಣಚಿತ್ರಗಳು, ಕಲ್ಲಾಸರೆಯ ಚಿತ್ರಗಳು ಅಸಂಖ್ಯಾತವಾಗಿ ಗುರುತಿಸಲಾಗಿದೆ. ಹೀಗೆ ಪ್ರಸ್ತುತ ಅಧ್ಯಯನ ಪ್ರದೇಶವಾದ ಕೂಡ್ಲಿಗಿ ತಾಲೂಕಿನಲ್ಲಿಯು ಸಹ ಹಲವು ರೀತಿಯ ಚಿತ್ರರಚನೆಗಳು ಇತರೆ ಅವಶೇಷಗಳಾಗಿ ಕಂಡುಬಂದಿವೆ.

#### ಗವಿವರ್ಣಚಿತ್ರಗಳು

ಗವಿವರ್ಣ ಚಿತ್ರಗಳನ್ನು ಆದಿಮಾನವರು ತಾವು ವಾಸಿಸುತ್ತಿದ್ದ ಗವಿಗಳ ಇಲ್ಲವೆ ತಾತ್ಕಲಿಕವಾಗಿ ಆಶ್ರಯ ಪಡೆದಿದ್ದ ಕಲ್ಲಾಸರೆಗಳ ಮೇಲ್ಛಾವಣೆಗಳಲ್ಲಿ, ಗೋಡೆಗಳಲ್ಲಿ ಚಿತ್ರಗಳನ್ನು ಬಿಡಿಸಿದ್ದಾರೆ. ಸಾಮಾನ್ಯವಾಗಿ ಮನುಷ್ಯರು, ಗೂಳಿಯ, ಇತರೆ ಪ್ರಾಣಿಗಳ ರೇಖಾ ಚಿತ್ರಗಳು ಹೆಚ್ಚಾಗಿರುತ್ತವೆ. ಕೆಲವು ಕಡೆ ಸಮೂಹ ನೃತ್ಯ, ಪ್ರಾಣಿಗಳ ಸಾಲು, ಮನುಷ್ಯರು ಕೈ ಕೈ ಜೋಡಿಯಾಗಿ ಹಿಡಿದಿರುವ ದೃಶ್ಯಗಳು, ಬೇಟೆಯ ದೃಶ್ಯಗಳು ಕಾಣುತ್ತವೆ.

ಕೂಡ್ಲಿಗಿ ತಾಲೂಕಿನ ಸರ್ವೋದಯ ಗ್ರಾಮದ ಪೂರ್ವದಲ್ಲಿ ಪಂಚಲಿಂಗೇಶ್ವರ ಗುಹಾಂತರ ದೇವಾಲಯದ ಸುಮಾರು ಒಂದು ನೂರು ಅಡಿಗಳಿಗೂ ಉದ್ದವಾದ ಕಣ ಶಿಲೆಯ ವಿಶಾಲವಾದ ಬಂಡೆಗಲ್ಲಿನ ಕೆಳಭಾಗದಲ್ಲಿ ಬಿಳಿವರ್ಣದ ಮನುಷ್ಯರು ಕೈ ಕೈ ಹಿಡಿದಿರುವ ಚಿತ್ರಗಳು ಕಂಡುಬಂದಿವೆ.[೨೧] ಮತ್ತು ಇದೇ ನೆಲೆಯ ಕೋಟೆಯ ಪ್ರದೇಶದಲ್ಲಿ ನೈಸರ್ಗಿಕ ಕಲ್ಮನೆಯಂತೆ ಕಾಣುವ ಕಲ್ಲಾಸರೆಯಲ್ಲಿ ಮಾನವ ಬೇಟೆಯಾಡುವ ದೃಶ್ಯವನ್ನು ಎರಡು ರೀತಿಯ ಬಣ್ಣದ ಚಿತ್ರಗಳನ್ನು ವಿದ್ವಾಂಸರು ಗುರುತಿಸಿದ್ದಾರೆ. ಕಂದು ಮತ್ತು ಬಿಳಿ ಬಣ್ಣ ಚಿತ್ರಗಳಿದ್ದು ಇದರಲ್ಲಿ ಐದು ಚಿತ್ರಗಳು ಮಾನವ ಕುದುರೆಯ ಮೇಲೆ ಹೋಗುವಂತಿರುವ ಚಿತ್ರಗಳಾಗಿವೆ. ಬಿಳಿವರ್ಣದ ಚಿತ್ರ ಮತ್ತು ಕಂದು ಬಣ್ಣದ ಚಿತ್ರಗಳೆರಡು ಒಂದೇ ರೀತಿಯಾಗಿದ್ದು ಕಂದು ವರ್ಣದ ಗೆರೆಗಳು ಮಾತ್ರ ದಪ್ಪವಾಗಿವೆ. ಕೆಂಪು ಬಣ್ಣದಲ್ಲಿ ಕಂಡುಬರುವ ಪ್ರಾಣಿ ಎಮ್ಮೆಯ ಚಿತ್ರ ವಾಗಿರಬಹುದೆಂದು ಗುರುತಿಸಲಾಗಿದೆ.[೨೨]

ಇವುಗಳಿಂದ ನೂತನ ಶಿಲಾಯುಗದ ಮಾನವರು ಈ ಗುಹೆಯಲ್ಲಿ ವಾಸವಾಗಿದ್ದರೆಂದು ತಿಳಿದುಬರುತ್ತದೆ. ಹಾಗೂ ಸಮೀಪದ ಅಪ್ಪಯ್ಯನ ಹಳ್ಳಿಯಲ್ಲಿಯು ಸಹ ಡಾ.ಎಂ.ಎಸ್. ನಾಗರಾಜ್, ಡಾ.ರು.ಮ.ಕ್ಷಡಕ್ಷರಯ್ಯ ಮೊದಲಾದವರು ಶೋಧಿಸಿದರು.[೨೩]

ಬಯಲು ಬಂಡೆ ಚಿತ್ರಗಳು ಮುಖ್ಯವಾಗಿ ಪಶುಪಾಲಕರ ರಚನೆಗಳೆಂದು ಹೇಳಬಹುದು ಅವು ಪಶುಪಾಲನೆಯ ಸಂಧರ್ಭದಲ್ಲಿ ರಚಿತವಾಗಿರುವ ಸಾಧ್ಯತೆಗಳು ಹೆಚ್ಚು ಅಪ್ಪಯ್ಯನಹಳ್ಳಿ ಈ ರೀತಿ ಬಯಲು ಬಂಡೆ ಚಿತ್ರಗಳಿವೆ

**ಮನುಷ್ಯನ ಚಿತ್ರಗಳು**

ಚಿತ್ರ ಪ್ರಕಾರಗಳಲ್ಲಿ ಮನುಷ್ಯ ಚಿತ್ರಗಳು, ಪ್ರಾಣಿ ಚಿತ್ರಗಳು ಕಂಡುಬರುತ್ತವೆ. ಕೂಡ್ಲಿಗಿ ತಾಲೂಕಿನ ಗುಡೆಕೋಟೆಯ ಬೆಟ್ಟಗಳಲ್ಲಿ ಬಯಲು ಒಂಡೆಯ ಚಿತ್ರವನ್ನು ಗುರುತಿಸಲಾಗಿದೆ. ತಲೆಯು ದೇಹಕ್ಕೆ ಅಂಟಿಕೊಂಡಿರುವಂತೆ ಕಾಲುಗಳನ್ನು ಅಗಲವಾಗಿಸಿ ಮತ್ತು ಪಾದಗಳನ್ನು ಸಂಪೂರ್ಣವಾಗಿ ಪರಸ್ಪರ ವಿರದ್ದ ದಿಕ್ಕಿಗಿರುವಂತೆ ಮತ್ತು ಕೈಗಳನ್ನು ಭುಜಕ್ಕೆ ಸಮನಾಗಿರುವಂತೆ ಚಿತ್ರಿಸಲಾಗಿದೆ. ರೇಖಾ ಚಿತ್ರವನ್ನು ತುಂಬಾ ದಪ್ಪವಾಗಿ ಕೊರೆದಿರುವುದನ್ನು ಕಾಣಬಹುದಾಗಿದೆ. ಹಾಗೂ ಇದರ ಪಕ್ಕದ ಮತ್ತೊಂದು ಎತ್ತರದ ಬಂಡೆಯ ತುದಿಯಲ್ಲಿ ಮಾನವಾಕೃತಿಯ ಚಿತ್ರವನ್ನು ಬಿಡಿಸಲಾಗಿದೆ. ಇದು ಸಹ ಪೂರ್ವಭಿಮುಖವಾಗಿದ್ದು ಮಾನವ ನಿಂತಿರುವ ಭಂಗಿಯಲ್ಲಿ ತನ್ನ ಎಡ ಕೈಯನ್ನು ಮೇಲಕ್ಕೆ ಎತ್ತಿರುವಂತೆ ಹಾಗೂ ಬಲ ಕೈಯಲ್ಲಿ ಆಯುಧವನ್ನು ಹಿಡಿದಿರುವಂತೆ ಕಂಡುಬಂದಿದೆ. ಈ ರೀತಿಯ ಚಿತ್ರಗಳು ಗುಡೇಕೋಟೆ ಬೆಟ್ಟದಲ್ಲಿರುವುದು ವಿಶೇಷವಾಗಿದೆ. ಈ ಬೆಟ್ಟದ ಸಮೀಪದಲ್ಲಿ ಕಂಡಿಕೋಣೆ ಸಮಾಧಿಯು ಕಂಡುಬಂದಿರುವುದರಿಂದ ಇವು ಪ್ರಾಗೈತಿಹಾಸಿಕ ಮಹತ್ವ ಪಡೆದಿದೆ ಎಂದು ಹೇಳಬಹುದು. ಹಾಗೂ ಗುಡೇಕೋಟೆಯ ದಕ್ಷಿಣಕ್ಕಿರುವ ಬೃಹತ್ ಗುಂಡುಗಳ ಮೇಲೆ ವಾನರಸೇನೆಯಂತೆಯು ಅಥವಾ ಅಲಂಕೃತವಾದ ಹನುಮನಂತೆ ಕಾಣುವ ವಿಚಿತ್ರ ರೀತಿಯ ಕಲಾತ್ಮಕ ಚಿತ್ರಗಳು ಈ ಪ್ರದೇಶದಲ್ಲಿ ಕಂಡುಬಂದಿವೆ. ಹಾಗೂ ಗುಡೇಕೋಟೆಯ ಪೂರ್ವ

ದಿಕ್ಕಿನಲ್ಲಿ ಚಕ್ಕಮಂಡೆಯ ಸಮೀಪದಲ್ಲಿರುವ ಸನ್ಯಾಸಪ್ಪ ಕೆರೆಯ ದಂಡೆಯ ಹುಟ್ಟು ಬಂಡೆಯ ಮೇಲೆ ಮಾನವಾಕೃತಿಯ ನಗ್ನ ಚಿತ್ರವನ್ನು ನಿಂತಬಂಗಿಯಲ್ಲಿ ಎರಡು ಕೈಗಳನ್ನು ಅಗಲಿಸಿ ಸಮಾನಾಂತರಗೊಳಿಸಲಾಗಿದೆ ಹಾಗೂ ಕಾಲುಗಳನ್ನು ಅಗಲಿಸಿದಂತೆ ತೋರುತ್ತದೆ.

**ಪ್ರಾಣಿಚಿತ್ರಗಳು**

ಕೂಡ್ಲಿಗಿ ತಾಲೂಕಿನ ಮಾಲಹಳ್ಳಿಯ ಬಯಲಿನಲ್ಲಿರುವ ದವಳಪ್ಪನ ಗುಂಡಿನಲ್ಲಿ ಹಾವು ಮತ್ತು ಜಿಂಕೆಯನ್ನು ಹೋಲುವ ಚಿತ್ರಗಳನ್ನು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಗುರುತಿಸಲಾಗಿದೆ. ಜಿಂಕೆಯ ಚಿತ್ರದಲ್ಲಿ ಕೋಡುಗಳನ್ನು ಉದ್ದವಾಗಿ ಬಿಡಿಸಲಾಗಿದೆ. ಹಾಗೂ ಕಾಲುಗಳು ಗಿಡ್ಡವಾಗಿ ಮೂಡಿಸಲಾಗಿದೆ. ಗುಂಡಿನ ಮಧ್ಯ ಭಾಗದಲ್ಲಿ ಕಂಡುಬಂದಿದೆ. ಇದರ ಪಕ್ಕದಲ್ಲಿ ತಿರುವುಗಳಿರುವುದನ್ನು ಶೋಧಿಸಲಾಗಿದ್ದು ಇದರಿಂದ ಈ ನೆಲೆಯ ಬೃಹತ್ ಶಿಲಾಯುಗದ ಕಾಲಘಟ್ಟಕ್ಕೆ ಒಳಪಟ್ಟಿತ್ತು ಎಂಬುದನ್ನು ಖಚಿತವಾಗಿ ಹೇಳಬಹುದು. ಒಟ್ಟಿನಲ್ಲಿ ಈ ತಾಲೂಕು ಪರಿಸರದಲ್ಲಿ ವಿವಿಧ ರೀತಿಯ ಗೀರು ಚಿತ್ರಗಳು, ಕುಟ್ಟು ಚಿತ್ರಗಳು ಕಂಡುಬಂದಿರುವುದರಿಂದ ಪ್ರಾಗೈಹಾಸಿಕ ಕಾಲದ ಚಿತ್ರಕಲೆ ಮತ್ತು ಅಂದಿನ ಸಂಸ್ಕೃತಿ ಆಚರಣೆಗಳನ್ನು ತಿಳಿಯಲು ಸಹಾಯಕವಾಗಿದೆ.

**ಕಾಲಮಾನ**

ಬೃಹತ್ ಶಿಲಾಯುಗದ ಕಾಲಮಾನವನ್ನು ಉತ್ತರ ಕರ್ನಾಟಕ ಪಶ್ಚಿಮ ಭಾಗದಲ್ಲಿ ಹಳ್ಳೂರು, ಕೋಮಾರನಹಳ್ಳಿಯ ಬೃಹತ್ ಶಿಲಾಯುಗ ಸಂಸ್ಕೃತಿಯ ಸುಟ್ಟ ವಸ್ತುಗಳು ಮತ್ತು ಮೃತ್ಪಾತ್ರೆಗಳನ್ನು ಇಂಗಾಲ ೧೪ ಮತ್ತು ಥರ್ಮೋಲೊಮಿನಿಸೆನ್ಸ್ ತಂತ್ರದ ಕಾಲಮಾನಗಳು ಈ ಸಂಸ್ಕೃತಿಯ ಆರಂಭ ಕಾಲ ಸುಮಾರು ಕ್ರಿ.ಪೂ ೧೪೦೦-೧೦೦೦ ಅಂತರದಲ್ಲಿ ಇದೆ ಎಂದು ಸೂಚಿಸುತ್ತದೆ.[೨೪] ಬಹುಶಃ ೧೩೦೦-೧೨೦೦ ಇದರ ಅಂತ್ಯ ಕ್ರಿ.ಪೂ. ೮೦೦ ಆಗಿತ್ತು ಎಂದು. ಹಾಗೂ ದಕ್ಷಿಣ ಕರ್ನಾಟಕದಲ್ಲಿಯ ಬನಹಳ್ಳಿಯ ಇಂಗಾಲ ೧೪ ಕಾಲಮಾನಗಳು ಈ ಪ್ರದೇಶದ ಈ ಸಂಸ್ಕೃತಿಯು ಬಹುಮಟ್ಟಿಗೆ ಕ್ರಿ.ಪೂ. ೬೦೦ ರಿಂದ ಕ್ರಿ.ಶ ೧ನೇ ಶತಮಾನದ ವರೆಗೆ ಅಸ್ತಿತ್ವದಲ್ಲಿತ್ತು ಎಂಬುದು ವೈಜ್ಞಾನಿಗೆ ಕಾಲ ನಿರ್ಣಯದ ಆಧಾರದ ಮೇಲೆ ನಿರ್ದರಿಸಲಾಗಿದೆ.[೨೫]

**ಅಡಿಟಿಪ್ಪಣಿಗಳು**

೧. ಸುಂದರ ಅ, ಕರ್ನಾಟಕ ಚರಿತ್ರೆ (ಸಂ.೧) ಪು.ಸಂ, ೨೩೩

೨. ತಿಪ್ಪೇಸ್ವಾಮಿ ಹೆಚ್., ಕೂಡ್ಲಿಗಿ ತಾಲೂಕಿನ ಅಪರೂಪದ ಮಾನವಾಕೃತಿಗಳು ಇತಿಹಾಸ ದರ್ಶನ (ಸಂ,೧೪) ಪು.ಸಂ, ೨೦

೩. ಅದೇ, ಪು.ಸಂ, ೨೧

೪. ರಾವ್.ಕೆ.ಪಿ., ಡೆಕನ್ ಮೆಗಲಿಥಿಸ್, ಪು.ಸಂ, ೨೧

೫. ಅದೇ, ಪು.ಸಂ, ೬

೬. ತಿಪ್ಪೇಸ್ವಾಮಿ ಹೆಚ್., ಪೂರ್ವೋಕ್ತ, ಪು.ಸಂ, ೨೧-೨೨

೭. ಸುಂದರ ಅ, ಪೂರ್ವೋಕ್ತ, ಪು.ಸಂ, ೨೪೧

೮. ಶ್ರೀನಿವಾಸ ಎಲ್., ಹಂಪಿ ಪರಿಸರದ ಆದಿಮಾನವನ ನೆಲೆಗಳು, ಪು.ಸಂ, ೫೦

೯. ಜಯಣ್ಣ ಯು., ಮೊಳಕಾಲ್ಮೂರು ತಾಲೂಕಿನ ಪುರಾತತ್ವೀಯ ಪರಿಸರ, ಪು.ಸಂ, ೧೩೨

೧೦. ಸೂರ್ಯಕಾಂತ ಪಿ., ಕೊಣ್ಣೂರು ಪರಿಸರದ ಪುರಾತತ್ವ ಅಧ್ಯಯನ, ಅಪ್ರಕಟಿತ ಎಂಫಿಲ್ ಸಂಪ್ರಬಂಧ ಪು.ಸಂ, ೨೦.

೧೧. ಜಯಣ್ಣ ಯು. ಪೂರ್ವೋಕ್ತ, ಪು.ಸಂ, ೧೨೬

೧೨. ಅದೇ, ಪು.ಸಂ, ೧೨೬

೧೩. ಅದೇ, ಪು.ಸಂ, ೧೪೨

೧೪. ಅದೇ, ಪು.ಸಂ, ೧೪೩

೧೫. ಅದೇ, ಪು.ಸಂ, ೧೪೩

೧೬. ಅದೇ, ಪು.ಸಂ, ೧೪೩

೧೭. ಅದೇ, ಪು.ಸಂ, ೧೪೪

೧೮. ವಾಸುದೇವ ಬಡಿಗೇರ್, ಹಂಪಿ ಪರಿಸರದ ಲೋಹಶಾಸ್ತ್ರಕಲೆ, ಇತಿಹಾಸದರ್ಶನ (ಸಂ,೧೪) ಪು.ಸಂ, ೨೩-೨೫.

೧೯. ಲಕ್ಷ್ಮಣ್ ಎಲ್.ಡಿ., ಹೊಸಪೇಟೆ ಪರಿಸರದ ಕಬ್ಬಿಣದ ಕುಲುಮೆಗಳು, ಪು.ಸಂ, ೪೦

೨೦. ವಾಸದೇವ ಬಡಿಗೇರ್, ಪೂರ್ವೋಕ್ತ, ಪು.ಸಂ, ೨೩-೨೫

೨೧. ಬಸವರಾಜಪ್ಪ, ಎಚ್.ಈ., ಬಳ್ಳಾರಿ ಜಿಲ್ಲೆಯ ಚಿತ್ರಕಲೆ, ಪು.ಸಂ, ೬

೨೨. ಅಂತರ್‌ಜಾಲದ ಮಾಹಿತಿ (Karnataka travel. Blogspot in /2013/09 roct art-Gudekete Fort)

೨೩. ಸುಂದರ ಅ. ಕರ್ನಾಟಕ ಪ್ರಾಗಿತಿಹಾಸ ಕಾಲದ ಚಿತ್ರಕಲೆ, ಪು.ಸಂ, ೩೫೨-೩೭೯

೨೪. ಸುಂದರ ಅ, ಪೂರ್ವೋಕ್ತ, ಪು.ಸಂ, ೧೮೨

೨೫. ಅದೇ, ಪು.ಸಂ, ೧೮೨

# ಅಧ್ಯಾಯ: ಐದು

## ಸಮಾರೋಪ

ಕೂಡ್ಲಿಗಿ ತಾಲೂಕು ಭೌಗೋಳಿಕವಾಗಿ ಗ್ರಾನೈಟ್ ಶಿಲೆಯ ಬೆಟ್ಟ ಗುಡ್ಡ ಅರಣ್ಯಗಳಿಂದ ಆವೃತ ಪ್ರದೇಶವಾಗಿದ್ದು ಈ ಬೆಟ್ಟ ಗುಡ್ಡಗಳಲ್ಲಿ ಗವಿಕಲ್ಲಾಸರೆಗಳಿವೆ. ಈ ಪ್ರದೇಶದಲ್ಲಿ ಹಿಂದೆ ಚಿನ್ನಹಗರಿ ನದಿ – ಹಳ್ಳಗಳು ಹರಿಯುತ್ತಿದ್ದರಿಂದ ನೀರಿನ ಅನುಕೂಲತೆಯಿಂದ ಕೂಡಿತ್ತು. ಈ ಕಾರಣದಿಂದ ಪ್ರಾಚೀನ ಮಾನವನು ಈ ಪ್ರದೇಶವನ್ನು ತನ್ನ ವಾಸಸ್ಥಾನವನ್ನಾಗಿ ಮಾಡಿಕೊಂಡಿದ್ದನು. ಈ ಪ್ರದೇಶದಲ್ಲಿ ಇದುವರೆಗೆ ದೊರೆತಿರುವ ಪ್ರಾಚ್ಯ ಅವಶೇಷಗಳ ಆಧಾರದಿಂದ ಆದಿ ಹಳೆ ಶಿಲಾಯುಗ ಕಾಲಘಟ್ಟದಿಂದ ಮಾನವನು ಜೀವನಕ್ರಮವನ್ನು ಆರಂಭಿಸಿದನೆಂಬುದಕ್ಕೆ ಆಧಾರಗಳಿವೆ. ಅಂದರೆ ಮಾನವನು ಈ ಪ್ರದೇಶದಲ್ಲಿ ಆದಿ ಹಳೆಶಿಲಾಯುಗದಿಂದ ಜೀವನ ಕ್ರಮವನ್ನು ಪ್ರಾರಂಭಿಸಿ ಪ್ರಸ್ತುತ ಇಂದಿನವರೆಗೂ ಸತತವಾಗಿ ನೆಲೆಸಿರುವನೆಂದು ಈ ಅಧ್ಯಯನಗಳಿಂದ ತಿಳಿದುಬಂದಿದೆ.

ಕೂಡ್ಲಿಗಿ ತಾಲೂಕಿನ ಸುತ್ತಮುತ್ತಲಿನ ಸನ್ನಿವೇಶವು ಶಿಲಾಯುಗದ ಮಾನವನಿಗೆ ಅನುಕೂಲಕರವಾಗಿತ್ತೆಂದು ಅಥವಾ ಪ್ರತಿಕೂಲಕರವಾಗಿತ್ತೆ? ಎಂಬ ವಿವರವನ್ನೊಳಗೊಂಡಿದೆ. ಕೂಡ್ಲಿಗಿ ಎಂಬ ಸ್ಥಳನಾಮದ ಕುರಿತು ಯಾವುದೇ ಲಿಖಿತ ಆಕರಗಳಿಲ್ಲವಾದ್ದರಿಂದ ದಂತಕಥೆ, ಐತಿಹ್ಯ ಹಾಗೂ ಮೌಖಿಕ ಆಕಾರಗಳಿಂದ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ. ಹಾಗೂ ಈ ತಾಲೂಕಿನ ಪ್ರಾಗಿತಿಹಾಸ ಕಾಲವನ್ನು ಇಲ್ಲಿ ದೊರೆತಿರುವ ಉಪಕರಣಗಳಿಂದ, ವಸ್ತು ಅವಶೇಷಗಳಿಂದ, ಮೃತ್ಪಾತ್ರೆಗಳಿಂದ ಹಾಗೂ ವಿದ್ವಾಂಸರು ಸಂಶೋಧಿಸಿದ ಇನ್ನಿತರ ಕುರುಹುಗಳಿಂದ ಹಳೆಶಿಲಾಯುಗದಿಂದ ಶಿಲಾ–ತಾಮ್ರಯುಗದವರೆಗೆ ಅಧ್ಯಯನ ಪ್ರದೇಶದಲ್ಲಿ ಕಂಡು ಬರುವ ನೆಲೆಗಳ ಹಿನ್ನೆಲೆಯಲ್ಲಿ ವಿವರಿಸಲಾಗಿದೆ.

ಬೃಹತ್ ಶಿಲಾಯುಗ ಸಂಸ್ಕೃತಿ ಮತ್ತು ನೆಲೆಗಳ ಸ್ವರೂಪವನ್ನು ಕುರಿತಂತೆ ಮೂರನೇ ಭಾಗದಲ್ಲಿ ತಿಳಿಸಲಾಗಿದೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಬಹುತೇಕವಾಗಿ ಬೃಹತ್ ಶಿಲಾಯುಗದ ಅವಶೇಷಗಳು ಕಂಡುಬರುವುದರಿಂದ ಈ ಸಂಸ್ಕೃತಿಯ ಜನರು ವಿವಿಧ ಮಾದರಿಯ ಶಿಲಾಗೋರಿಗಳನ್ನು ನಿರ್ಮಿಸುತ್ತಿದ್ದರು. ಜೊತೆಗೆ ಈ ಹಂತದಲ್ಲಿ ಕಬ್ಬಿಣದ ಅದಿರಿನಿಂದ ಆಯುಧಗಳನ್ನು ತಯಾರಿಸುವ ತಂತ್ರಗಾರಿಕೆ ಪ್ರಥಮಬಾರಿಗೆ ರೂಡಿಸಿಕೊಳ್ಳಲಾಯಿತು. ಇದರಿಂದ

ತಾಮ್ರಶಿಲಾಯುಗದ ಆಯುಧಗಳ ಜೊತೆಗೆ ಕಬ್ಬಿಣದ ಆಯುಧಗಳು ಹೆಚ್ಚು ಪ್ರಚಾರಕ್ಕೆ ಬಂದವು. ಭಾರತದಲ್ಲಿ ಈ ಸಂಸ್ಕೃತಿಯ ನೆಲೆಗಳು ನಾನಾ ಕಡೆಗಳಲ್ಲಿ ಕಂಡುಬಂದಿವೆ. ಅಲ್ಲದೆ ಇಂದಿನವರೆಗೂ ಸಹ ಈ ಸಂಸ್ಕೃತಿಯ ಹೊಸ ನೆಲೆಗಳು ಬೆಳಕಿಗೆ ಬರುತ್ತಲೇ ಇವೆ.

ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿ ಈ ಸಂಸ್ಕೃತಿಯ ನೆಲೆಗಳನ್ನು ಹೋಲಿಸಿದರೆ, ಉತ್ತರ ಕರ್ನಾಟಕದ ನೆಲೆಗಳು ಅಧ್ಯಯನಕ್ಕೆ ಆಶಾದಾಯಕವಾಗಿದೆ. ಈ ಸಂಸ್ಕೃತಿಗೆ, ಸಂಬಂಧಿಸಿದಂತೆ ಬಳ್ಳಾರಿ ಜಿಲ್ಲೆಯ ಸಂಗನಕಲ್ಲು, ಕಪ್ಪಗಲ್ಲು, ನಿಟ್ಟೂರು, ತೆಕ್ಕಲಕೋಟೆ ಕುಡುತಿನಿ ಮುಂತಾದ ನೆಲೆಗಳಲ್ಲದೆ. ಹಾಗೂ ಕೂಡ್ಲಿಗಿ ತಾಲೂಕಿನ ಪೂರ್ವದಲ್ಲಿರುವ ಗಡಿಯಲ್ಲಿಯ ತಾಲೂಕಾದ ಮೊಳಕಾಲ್ಮೂರಿನ ಬ್ರಹ್ಮಗಿರಿನೆಲೆಯಲ್ಲಿ ಉತ್ಖನನಗಳನ್ನು ನಡೆಸಲಾಗಿದೆ. ಅಲ್ಲದೆ ಇತರೆ ಬೇರೆ ಬೇರೆ ನೆಲೆಗಳ ಸಂಶೋಧನೆ ಹಾಗೂ ಉತ್ಖನನಗಳಿಂದ ಈ ಸಂಸ್ಕೃತಿಯನ್ನು ನಿರ್ದಿಷ್ಟ ಸ್ತರದಲ್ಲಿ ಗುರುತಿಸಿ ಅದಕ್ಕೊಂದು ಕಾಲಮಾನವನ್ನು ನಿಗಧಿಗೊಳಿಸಿರಲಿಲ್ಲ. ಈ ಸಂಸ್ಕೃತಿಗೆ ಸಂಬಂಧಿಸಿದಂತೆ ನೆಲೆಗಳನ್ನು ವಾಸ್ತವ್ಯದ ನೆಲೆಗಳು ಮತ್ತು ಸ್ಮಶಾನ ನೆಲೆಗಳೆಂದು ಎರಡು ವಿಧಗಳಾಗಿ ವಿಂಗಡಿಸಲಾಗಿದೆ.

ಕರ್ನಾಟಕದ ವಿವಿಧ ಭಾಗಗಳಲ್ಲಿ ಜನವಾಸ್ತವ್ಯದ ನೆಲೆಗಳಿಗಿಂತ ಅಧಿಕ ಸಂಖ್ಯೆಯಲ್ಲಿವೆ. ಆದರೆ ಈ ಸಂಸ್ಕೃತಿಯ ವಾಸ್ತವ್ಯದ ನೆಲೆಗಳು ಇಲ್ಲ ವೆಂದರ್ಥವಲ್ಲ, ಸಮಾಧಿ ನೆಲೆಗಳಲ್ಲಿ ಕಪ್ಪು–ಕೆಂಪು ವರ್ಣದ ಮಡಿಕೆ ಚೂರುಗಳು ದೊರೆತಿವೆ. ಶಾಶ್ವತವಾಗಿ ಉಳಿಯುವಂತ ಕಲ್ಗೋರಿಗಳನ್ನು ಈ ಸಂಸ್ಕೃತಿಯ ಜನರು ಕಟ್ಟುವ ಪ್ರಮುಖ ಉದ್ದೇಶ ತಿಳಿಯದೇ ಹೊದರೂ ಅವರಲ್ಲಿ ಧಾರ್ಮಿಕ ನಂಬಿಕೆ, ಆಚರಣೆಗಳು ಈ ರೀತಿಯ ರಚನೆಗೆ ಕಾರಣ ವಾಗಿರಬಹುದು. ಕೆಲವು ಕಡೆ ನೂತನ ಶಿಲಾಯುಗದ ಸಂಸ್ಕೃತಿಯ ನೆಲೆಗಳಿರುವ ಭಾಗದಲ್ಲಿಯೇ ವಿಶೇಷವಾಗಿ ಬೃಹತ್ ಶಿಲಾಯುಗದ ಸಂಸ್ಕೃತಿಯ ನೆಲೆಗಳಿರುವುದು ಮೇಲೆ ತಿಳಿಸಿದ ಉತ್ಖನನ ನೆಲೆಗಳಿಂದ ತಿಳಿಯುತ್ತದೆ.

ಪ್ರಸ್ತುತ ಅಧ್ಯಯನ ಪ್ರದೇಶದ ನೆಲೆಗಳು ನೂತನ ಶಿಲಾಯುಗ, ಶಿಲಾ–ತಾಮ್ರಯುಗದ ಸಂಸ್ಕೃತಿಯ ಅವಶೇಷಗಳ ಜೊತೆಯಲ್ಲಿಯೇ ಬೆರೆತಿವೆ. ಅಲ್ಲದೆ ಆ ನೆಲೆಗಳಲ್ಲಿ ಆದಿ ಇತಿಹಾಸಕಾಲದ ಅವಶೇಷಗಳೂ ಸಹ ಲಭಿಸುವುದು ವಿಶೇಷವಾಗಿದೆ.

ನೂತನ ಶಿಲಾಯುಗ ಸಂಸ್ಕೃತಿಯ ಹಂತದಲ್ಲಿಯೇ ವಿಶಿಷ್ಟವಾದ ಕಪ್ಪು–ಕೆಂಪು ವರ್ಣದ ಮೃತ್ಪಾತ್ರೆ ಹಾಗೂ ವಿಶಿಷ್ಟ ಶೈಲಿಯ ಶಿಲಾ ಸಮಾಧಿಗಳ ನಿರ್ಮಿಸಿರುವುದು ತಿಳಿದುಬರುತ್ತದೆ. ಈ ನಿತ್ಯ ಜೀವನಕ್ಕೆ ಸಂಬಂಧಿಸಿದ ಸಾಂಸ್ಕೃತಿಕ ಬದಲಾವಣೆಗಳು ಪರಿಸರ ಹಾಗೂ ಇತರ ಪ್ರಭಾವಗಳಿಂದ ಉಂಟಾದವು. ಈ ಭಿನ್ನ ಸಂಪ್ರದಾಯವುಳ್ಳ ಬೇರೆ ಜನವರ್ಗದವರು ಈ ಪ್ರದೇಶಕ್ಕೆ ಬಂದು ಮೊದಲು ವಾಸಿಸುತ್ತಿದ್ದ ಜನರೊಡನೆ ಬೆರೆತರೋ ಎಂಬ ಪ್ರಶ್ನೆಯನ್ನು ಬಿಡಿಸಲಾಗಿಲ್ಲ ಆದರೂ ಸಹ ಇದಕ್ಕಿಂತ ಬದಲಾವಣೆ ಕಾಣುವುದರಿಂದ ಬೇರೆ ಜನವರ್ಗದವರೇ ಈ ಪ್ರದೇಶಕ್ಕೆ ಬಂದು ನೆಲಸಿದಂತೆ ತೋರುತ್ತದೆ. ಈ ಕಾರಣದಿಂದಲೇ ಈ ಎರಡು ಭಿನ್ನ ಸಂಸ್ಕೃತಿಯ ಅವಶೇಷಗಳು ಒಂದೇ ಕಡೆ ಕಂಡುಬರುತ್ತವೆ. ಹಾಗಾಗಿ ಈ ಕಾರಣದಿಂದಲೇ ಹೊಸ

ಜನಸಮುದಾಯದವರು ಸಹ ಹಿಂದೆ ಇದ್ದ ಜನವರ್ಗದೊಡನೆ ಸೇರಿ ಬಾಳುವೆ ನಡೆಸಿರಬೇಕು. ಅಲ್ಲದೆ ಈ ಜನರು ಬಹುಮಟ್ಟಿಗೆ ಕಬ್ಬಿಣ, ಲೋಹ ತಂತ್ರಗಾರಿಕೆಯನ್ನು ಬಲ್ಲವರಾಗಿದ್ದು ತಾವುಸಿದ್ಧಪಡಿಸುತ್ತಿದ್ದ ಕಬ್ಬಿಣದ ಸಾಮಾನುಗಳನ್ನು ಜನ ವಸತಿ ನೆಲೆಗಳಿಗೆ ಹೋಗಿ ವಿತರಿಸುವವರು ಆಗಿರಬಹುದಾದ ಸಾಧ್ಯತೆಗಳಿವೆ.

ಪ್ರಸ್ತುತ ಅಧ್ಯಯನ ಪ್ರದೇಶದ ಹುರುಳಿಯಾಳ್, ತಿಮ್ಮವ್ವನಹಳ್ಳಿ, ಓಬಳಾಪುರ, ಚಕ್ಕೆಮಂಡಿ ನೆಲೆಗಳಲ್ಲಿ ಕಬ್ಬಿಣದ ಕುಲುಮೆಗಳು ದೊರೆತಿವೆ. ಹಾಗೆಯೇ ಕಿಟ್ಟ ಅವಶೇಷಗಳು ದೊರೆಯುವುದರಿಂದ ಇವುಗಳನ್ನು ವೈಜ್ಞಾನಿಕ ವಿಶ್ಲೇಷಣೆಗೆ ಒಳಪಡಿಸಿದರೆ ಮತ್ತೊಷ್ಟು ಮಹತ್ವದ ಅಂಶಗಳು ಬೆಳಕಿಗೆ ಬರುವವು. ಈ ಎಲ್ಲಾ ನೆಲೆಗಳು ಕಬ್ಬಿಣದ ಅದಿರಿನ ನಿಕ್ಷೇಪವಿರುವ ಸಂಡೂರು ಬೆಟ್ಟದ ಸಮೀಪದಲ್ಲಿರುವುದರಿಂದ ಅಲ್ಲಿಂದಲೇ ಅದಿರನ್ನು ತಂದು ಇಲ್ಲಿ ಕಬ್ಬಿಣ ತಯಾರಿಸುವ ಘಟಕವನ್ನು ತೆರೆದು ಕಬ್ಬಿಣದ ಆಯುಧಗಳನ್ನು ತಯಾರಿಸಿ ಬೇರೆ ಕಡೆಗೆ ಪೂರೈಕೆಯಾಗಿರುವ ಸಾಧ್ಯತೆಗಳಿವೆ. ಈ ಕಬ್ಬಿಣದ ಆಯುಧಗಳಿಂದ ಕೃಷಿ ಕಾರ್ಯವು ಸುಧಾರಿಸಿತಲ್ಲದೆ ಸ್ವಲ್ಪ ಮಟ್ಟಿಗೆ ಕಲ್ಲಿನ ಆಯುಧಗಳು ಸ್ಥಗಿತಗೊಂಡವು. ತಮ್ಮ ಕಸುಬುಗಳ ಅನುಕೂಲಕ್ಕಾಗಿ ಅವರು ವಾಸವಾಗಿರುವ ಪ್ರದೇಶವನ್ನು ನಿಯಂತ್ರಣ ಮಾಡುವುದು ಅವಶ್ಯಕವಾಯಿತು. ಇದೇ ಮುಂದೆ ಒಂದು ಪ್ರದೇಶದ ರಾಜಕೀಯ ವ್ಯವಸ್ಥೆಗೆ ಎಡೆಮಾಡಿಟ್ಟಿರಬಹುದು.

ದೇಶದ ಹಾಗೂ ರಾಜ್ಯದ ಹಲವು ಭಾಗಗಳಲ್ಲಿ ಮಾನವಾಕೃತಿ ಕಲ್ಗೋಂಬೆಗಳು ವಿರಳವಾಗಿ ಕಂಡುಬಂದಿರುವಂತೆ ಪ್ರಸ್ತುತ ಅಧ್ಯಯನ ಪ್ರದೇಶದ ಹುಲಿಕುಂಟೆ ಮತ್ತು ಕುಮತಿ ಎರಡು ನೆಲೆಗಳಲ್ಲಿ ದೊರಕಿರುವ ಮಾನವಾಕೃತಿಯ ಶಿಲೆಗಳಷ್ಟು ಸ್ಪಷ್ಟವಾದ ಆಕೃತಿಯನ್ನು ಅವುಗಳಾವುವು ಹೊಂದಿಲ್ಲವೆಂಬುದು ತಿಳಿದುಬರುತ್ತದೆ. ಇದರಿಂದ ಈ ಪ್ರದೇಶವು ಮಹತ್ವವನ್ನು ಪಡೆದಿದೆ.

ಗುಡೇಕೋಟೆಯ ಬಯಲು ಬಂಡೆಗಳ ಮೇಲೆ ಎರಡು ಮಾನವಾಕೃತಿಯ ಚಿತ್ರಗಳು ಲಭ್ಯವಾಗಿವೆ. ಹಾಗೂ ಸಮೀಪದ ಸನ್ಯಾಸಪ್ಪ ಕೆರೆಯ ದಂಡೆಯ ಹುಟ್ಟು ಬಂಡೆಯ ಮೇಲೆ ನಗ್ನ ಮನುಷ್ಯನ ರೇಖಾ ಚಿತ್ರಗಳು ದೊರತಿವೆ. ಹಾಗೂ ಅಧ್ಯಯನ ಪ್ರದೇಶದ ಮಾಲಹಳ್ಳಿಯ ಬಯಲು ಬಂಡೆಯ ಮೇಲೆ ಜಿಂಕೆ ಮತ್ತು ಹಾವನ್ನು ಹೋಲುವ ಚಿತ್ರಗಳು ಕಂಡುಬಂದಿವೆ.

ಈ ತಾಲೂಕು ಪ್ರದೇಶದಲ್ಲಿ ಸುಮಾರು ೧೭ ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಗಳು ಬೆಳಕಿಗೆ ಬಂದಿದ್ದು, ಅವುಗಳಲ್ಲಿ ಪ್ರಸ್ತುತ ಅಧ್ಯಯನದ ಕ್ಷೇತ್ರಕಾರ್ಯದ ವೇಳೆಯಲ್ಲಿ ಹೊಸದಾಗಿ ಐದು ನೆಲೆಗಳನ್ನು ಶೋಧಿಸಲಾಗಿದೆ. ಇದು ಈ ಅಧ್ಯಯನದಲ್ಲಿ ಕಂಡು ಕೊಂಡ ಪ್ರಮುಖ ಫಲಿತವಾಗಿದೆ.

ಹಾಗೂ ತಾಲ್ಲೂಕಿನಲ್ಲಿ ಈ ಸಂಸ್ಕೃತಿಯ ನೆಲೆಗಳು ಗುಡೇಕೋಟೆ, ಹೊಸಹಳ್ಳಿ, ಕೂಡ್ಲಿಗಿ ಹೋಬಳಿಗಳಲ್ಲಿ ಮಾತ್ರ ಕಂಡುಬಂದಿವೆ. ಇದರಿಂದ ಈ ಭಾಗದಲ್ಲಿ ಈ ಸಂಸ್ಕೃತಿಯ ಜನರು ವಾಸಿಸಲು ಅನುಕೂಲವಿರುವ ಹಾಗೂ ಕಲ್ಗೋರಿಗಳನ್ನು ನಿರ್ಮಿಸಲು ಬೇಕಾದ ಚಪ್ಪಡಿಬಂಡೆಗಳು

ದೊರೆಯುವುದರಿಂದ ಈ ಭಾಗದಲ್ಲಿ ಅಧಿಕವಾಗಿವೆ. ಅಲ್ಲದೆ ಇತರೆ ಶಿಲಾಯುಗದ ಕಾಲಘಟ್ಟಕ್ಕೆ ಹೋಲಿಸಿದರೆ ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಗಳು ಹೇರಳವಾಗಿ ಕಂಡುಬಂದಿರುವುದು ವಿಶೇಷವಾಗಿದೆ. ಕೊಟ್ಟೂರು ಹೋಬಳಿ ಪ್ರದೇಶದಲ್ಲಿ ಮಾತ್ರ ಈ ಸಂಸ್ಕೃತಿಯ ನೆಲೆಗಳು ದೊರಕಿರುವುದಿಲ್ಲ. ಇದರಿಂದ ಈ ಪ್ರದೇಶವು ಆದಿಮಾನವ ವಾಸಿಸಲು ಯೋಗ್ಯವಾದ ಪರಿಸರದಿಂದ ಕೂಡಿರಲಿಲ್ಲ ಎಂಬ ಅರ್ಥವನ್ನು ತಿಳಿಯಬಹುದು. ಹೀಗೆ ಈ ಸಂಸ್ಕೃತಿಯ ಉಗಮ, ವಿಕಾಸ ಹಾಗೂ ವೈವಿಧ್ಯತೆಗಳಲ್ಲದೆ ಇವರ ವಸತಿ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಪದ್ಧತಿಗಳ ಬಗ್ಗೆ ವಿದ್ವಾಂಸರಲ್ಲಿ ಒಮ್ಮತ ಅಭಿಪ್ರಾಯಗಳಿಲ್ಲ. ಈ ಸಂಸ್ಕೃತಿಯು ಸುಮಾರು ಕ್ರಿ.ಪೂ.೧೨೦೦-೨೫೦ ವರ್ಷಗಳ ಅವಧಿಯಲ್ಲಿತ್ತೆಂದು ವೈಜ್ಞಾನಿಕ ವಿಶ್ಲೇಷಣೆಯಿಂದ ತಿಳಿದುಬರುತ್ತದೆ.

ಒಟ್ಟಾರೆಯಾಗಿ ಕೂಡ್ಲಿಗಿ ತಾಲೂಕಿನಲ್ಲಿ ದೊರೆತಿರುವ ಎಲ್ಲಾ ಬೃಹತ್ ಶಿಲಾಯುಗದ ನೆಲೆಗಳು ಅನ್ವೇಷಣಾ ನೆಲೆಗಳಾಗಿವೆ. ಹೊರತು ಉತ್ಖನನಕ್ಕೆ ಒಳಪಡಿಸಿರುವುದಿಲ್ಲ. ಹುಲಿಕುಂಟೆ, ಕುಮತಿ, ಕಲ್ಲಹಳ್ಳಿಯ ಬೂದಿದಿಬ್ಬ, ಹುರುಳಿಯಾಳ್ ಮತ್ತು ತಿಮ್ಮವ್ವನ ಹಳ್ಳಿಯ ಕುಲುಮೆ ನೆಲೆಗಳನ್ನು ಉತ್ಖನನ ಗೊಳಿಸಿದಾಗ ಮಾತ್ರ ಮತ್ತೊಷ್ಟು ಮಹತ್ವದ ಅಂಶಗಳು ಬೆಳಕಿಗೆ ಬರುತ್ತವೆ. ಹಾಗೂ ಗುಡೇಕೋಟೆಯ ಬೆಟ್ಟದಲ್ಲಿರುವ ಕಂಡಿಕೋಣೆಗೋರಿಯು ಇಂದಿಗೂ ಈ ತಾಲೂಕಿನಲ್ಲಿ ಸುಸ್ಥಿತಿಯಲ್ಲಿರುವ ಏಕೈಖ ಕಂಡಿಕೋಣೆಗೋರಿ ಎಂದೆನಿಸಿದೆ. ಆದರೆ ಇತ್ತೀಚೆಗೆ ಈ ನೆಲೆಯಲ್ಲಿ ಕಲ್ಲುಗಣಿಗಾರಿಕೆ ನಡೆಯುತ್ತಿರುವುದರಿಂದ ಈ ಗೋರಿಯು ಅಳಿವಿನಂಚಿಗೆ ಸಿಲುಕಿದೆ. ಇದೇ ರೀತಿ ಕುಮತಿ, ಹುಲಿಕುಂಟೆಯ ಮಾನವಾಕೃತಿಯ ಶಿಲೆಗಳು ನಿಧಿಗಳ್ಳರ ಅಥವಾ ಕಿಡಿಕೇಡಿಗಳ ಕೈಗೆ ಸಿಕ್ಕು ಅವನತಿಗೀಡಾಗುತ್ತಿವೆ. ಎಂಬುದು ಸತ್ಯಸಂಗತಿ ಆದಕಾರಣ ಈ ಎಲ್ಲಾ ಶಿಲಾಸಮಾಧಿಗಳನ್ನು ಸಂರಕ್ಷಣೆ ಕಾರ್ಯ ನಡೆಯಬೇಕಿದೆ.

# ಅನುಬಂಧಗಳು

೧. ಗ್ರಂಥಋಣ
೨. ಕೋಷ್ಠಕ
೩. ವಕ್ತೃವಿವರ
೪. ನಕ್ಷೆಗಳು
೫. ಛಾಯಾಚಿತ್ರಗಳು

## ೧. ಗ್ರಂಥಋಣ

**ಕನ್ನಡ ಗ್ರಂಥಗಳು**

ಅಂಬಳಿಕೆ ಹಿರಿಯಣ್ಣ, (ಪ್ರ,ಸಂ), ೨೦೦೯: ಕರ್ನಾಟಕ ವಿಷಯ ವಿಶ್ವಕೋಶ, ಸಂಪುಟ–೪, ಇತಿಹಾಸ ಮತ್ತು ಪುರಾತ್ವ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ ಮೈಸೂರು

ಇರ್ಫಾನ್ ಹಬೀಬ್, ೨೦೦೮: ಪೂರ್ವೇತಿಹಾಸ, ಚಿಂತನ ಪುಸ್ತಕ, ಬೆಂಗಳೂರು

ಉಜ್ಜನಿರುದ್ರಪ್ಪ, ೨೦೧೨: ಕೌತುಕ, ಉರುಪ್ರಕಾಶನ, ಸುಟ್ಟಕೋಡಿಹಳ್ಳಿ

—— ॥ —— ೨೦೧೨: ಅಚ್ಚರಿ, ಉರುಪ್ರಕಾಶನ, ಸುಟ್ಟಕೋಡಿಹಳ್ಳಿ

ಕೊಟ್ರೇಶ ಎಂ., ೨೦೧೧: ಬಳ್ಳಾರಿ ಜಿಲ್ಲೆಯ ಕೋಟೆಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ

ಗಿರಿಜಾ, ೨೦೧೧: ಸಂಡೂರು ತಾಲೂಕು ಒಂದು ಚಾರಿತ್ರಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು

ಗುರುಮೂರ್ತಿ ಪೆಂಡರೂರು, ೨೦೦೬: ಬಳ್ಳಾರಿ ಜಿಲ್ಲೆಯ ಸ್ಥಳನಾಮಗಳು ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜ ಪೇಟೆ, ಬೆಂಗಳೂರು

ಗೋಪಾಲ ಬಾ.ರಾ., ೧೯೯೬: ಇತಿಹಾಸ ಶಾಸ್ತ್ರ ಮತ್ತು ಸಿದ್ಧಾಂತ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

ಚಂದ್ರಶೇಖರಯ್ಯ ಬಿ.ಎಂ, ೧೯೮೮: ಕೂಡ್ಲಿಗಿ ತಾಲ್ಲೂಕು ದರ್ಶನ, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು

ನರಸಿಂಹಮೂರ್ತಿ ಎ.ವಿ., ೨೦೧೦: ಕರ್ನಾಟಕ ಪುರಾತತ್ವ ಕೆಲವು ಅಧ್ಯಯನಗಳು. ಪ್ರಸಾರಾಂಗ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ ಮಾನಸಗಂಗೋತ್ರಿ, ಮೈಸೂರು

—— ॥ —— ೧೯೮೦: ಪುರಾತತ್ವ ಶೋಧನೆ, ಬೆಂಗಳೂರು

ಭೀಮಣ್ಣ ಗಜಾಪುರ, ೨೦೧೨: ಕನಸ್ಸುಗಳಿಗೆ ರೆಕ್ಕೆಕಟ್ಟಿದವರು, ಕಾವ್ಯ ಪ್ರಕಾಶನ, ಕೆ. ಗಜಾಪುರ

ಮಹದೇವ ಸಿ., (ಸಂ), ೨೦೦೧: ಕರ್ನಾಟಕ ಪುರಾತತ್ವ ಶೋಧ, ಶ್ರೀ ಲಕ್ಷ್ಮೀ ಪ್ರಕಾಶನ, ಶ್ರೀರಂಗ ಪಟ್ಟಣ

ರಘುನಾಥ ಭಟ್ ಎಚ್.ಆರ್., ೧೯೮೪: ಪುರಾತತ್ವ ಪರಿಚಯ, ಮೈಸೂರು ವಿಶ್ವವಿದ್ಯಾಲಯ ಮೈಸೂರು

ರಮೇಶ ನಾಯಕ (ಸಂ), ೨೦೦೭: ಕರ್ನಾಟಕದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನಗಳ ಮರು ಚಿಂತನೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ

ರವಿಕುಮಾರ್ ಎನ್.ಎಮ್., ಮತ್ತು ವೃಷಬೇಂದ್ರಚಾರ್ ಎ., ೧೯೯೮: ಮುನ್ನಡೆಯಲ್ಲಿ ಕೂಡ್ಲಿಗಿ, ಹಿಮಾಂತ ಪ್ರಕಾಶನ, ಎಂ.ಬಿ ಅಯ್ಯನಹಳ್ಳಿ

ರಾಜರಾಮ್‌ಹೆಗಡೆ, ೨೦೦೩: ಇತಿಹಾಸ ಮತ್ತು ಪ್ರಾಕ್ತನಾಶಾಸ್ತ್ರ, ಕುವೆಂಪು ವಿಶ್ವವಿದ್ಯಾಲಯ, ಶಂಕರ ಘಟ್ಟ

ಸುಂದರ ಅ., ೧೯೭೭: ಕರ್ನಾಟಕ ಚರಿತ್ರೆ ಸಂಪುಟ ೧, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ

____ ॥ ____ ೧೯೮೮: ಪ್ರಾಚ್ಯವಸ್ತು ಸಂಶೋಧನೆ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.

____ ॥ ____ ೧೯೯೪: ಕರ್ನಾಟಕ ಪ್ರಾಗೈತಿಹಾಸಿಕ ಕಾಲದ ಕಲೆ ಬೆಂಗಳೂರು

ಸೂರ್ಯನಾಥ ಕಾಮತ್, (ಪ್ರ.ಸಂ), ೧೯೮೪: ಕರ್ನಾಟಕ ರಾಜ್ಯ ಗೆಜೆಟೀಯರ್ ಮೂರು ಸಂಪುಟಗಳು, ಕರ್ನಾಟಕ ಸರ್ಕಾರ, ಬೆಂಗಳೂರು

ಶರಣಬಸಪ್ಪ ಕೋಲ್ಕರ, ೨೦೧೦: ಶಿಲಾಯುಗದ ಗವಿಚಿತ್ರಗಳು, ಬಸವ ಪ್ರಕಾಶನ, ಗುಲಬರ್ಗಾ

ಶ್ರೀನಿವಾಸ್ ಎಲ್., ೨೦೧೦: ಹಂಪಿ ಪರಿಸರದ ಆದಿಮಾನವನ ನೆಲೆಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

ಶ್ರೀನಿವಾಸ ಪಾಡಿಗಾರ, ೧೯೭೮: ಪುರಾತತ್ವಶಾಸ್ತ್ರ ಪರಿಚಯ, ಚೈತನ್ಯ ಪ್ರಕಾಶನ, ಧಾರವಾಡ.

ಶ್ರೀಕಂಠಶಾಸ್ತ್ರಿ, ೧೯೭೫: ಪುರಾತತ್ವ ಶೋಧನೆ, ಮೈಸೂರು ವಿಶ್ವವಿದ್ಯಾಲಯ

ಶಿವತಾರಕ್ ಕೆ.ಬಿ. ೨೦೦೧: ಕರ್ನಾಟಕ ಪುರಾತತ್ವ ನೆಲೆಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

ಷೇಕಾಲಿ, (ಪ್ರ.ಸಂ), ೨೦೦೨: ಕರ್ನಾಟಕ ಚರಿತ್ರೆ ಸಂಪುಟಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

ವಿರುಪಾಕ್ಷಿ ಪೂಜಾರಹಳ್ಳಿ, ೨೦೦೬: ಚಿನ್ನಹಗರಿ ಸಿರಿ, ಚಿನ್ನಹಗರಿ ಪ್ರಕಾಶನ, ಪೂಜಾರಹಳ್ಳಿ

ವೆಂಕಟರತ್ನ ಮತ್ತು ಪ್ರದ್ಮ ಎಂ.ಬಿ., ೧೯೮೫: ಇತಿಹಾಸ ಸಂಶೋಧನಾ ಮಾರ್ಗ, ಪ್ರಿಟಿಂಗ್ ಅಂಡ್ ಪಬ್ಲಿಷಿಂಗ್ ಕಂಪನಿ ಲಿಮೆಟೆಡ್, ಬೆಂಗಳೂರು

ವಿಜಯ್ ಪೂಣಚ್ಚ ತಂಬಂಡ, (ಸಂ), ೨೦೦೧: ಚರಿತ್ರೆ ವಿಶ್ವಕೋಶ, ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

**ಪತ್ರಿಕೆ–ಲೇಖನ**

ಕನ್ನಡ ಪ್ರಭಾ ಪತ್ರಿಕೆ, ೨೮ ಮೇ ೨೦೧೧: ಅಪರೂಪದ ನಿಲುವುಗಲ್ಲುಗಳಿಗೆ ಬೇಕು ರಕ್ಷಣೆ,

—— ॥ —— ೫ ಮೇ ೨೦೧೦: ಹುರುಳಿಯಾಳ್ ಬಳಿ ಪುರಾತನ ಕುಲುಮೆ ಪತ್ತೆ,

—— ॥ —— ೯ ಜುಲೈ ೨೦೦೫: ಗುಡೇಕೋಟೆ ಸಮೀಪ ಆದಿಮಾನವನ ಗುಹೆಗಳು ಪತ್ತೆ,

**ಲೇಖನಗಳು**

ತಿಪ್ಪೇಸ್ವಾಮಿ ಹೆಚ್., ೧೯೯೯: ಕೂಡ್ಲಿಗಿ ತಾಲೂಕಿನ ಅಪರೂಪದ ಮಾನವಾಕೃತಿಗಳು, ಇ.ದ., ಸಂ.೧೪, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು

—— ॥ —— ೨೦೦೦: ನುಂಕೆಮಲೆ ಪರಿಸರದಲ್ಲಿ ಪ್ರಾಗ್ಯೆತಿಹಾಸಿಕ ನೆಲೆಗಳ ಶೋಧನೆ, ಇ.ದ., ಸಂ.೧೫, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು

—— ॥ —— ೨೦೦೦: ಕೂಡ್ಲಿಗಿ ತಾಲೂಕಿನಲ್ಲಿ ಪ್ರಾಗ್ಯೆತಿಹಾಸಿಕ ನೆಲೆಗಳು, ಇ.ದ., ಸಂ.೧೬, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು

ವಾಸುದೇವ ಬಡಿಗೇರ, ೨೦೦೦: ಹಂಪಿ ಪರಿಸರದ ಲೋಹಶಾಸ್ತ್ರಕಲೆ, ಇ.ದ., ಸಂ.೧೪, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು

ವಿರುಪಾಕ್ಷಿ ಪೂಜಾರಹಳ್ಳಿ, ೧೯೯೭: ಚಿನ್ನಹಗರಿ ನದಿ ಪರಿಸರದ ಪ್ರಾಚ್ಯಾವಶೇಷಗಳು ಒಂದು ಶೋಧನೆ, ಇ.ದ., ಸಂ.೧೨, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು

ಸೋಮಶೇಖರ ಎಸ್.ವೈ., ೧೯೯೬: ಚಿತ್ರದುರ್ಗ ತಾಲೂಕು ಚಿಪ್ಪನಕೆರೆಯಲ್ಲಿ ಕಂಡುಬಂದಿರುವ ಪ್ರಾಕ್ಚಾರಿತ್ರಿಕ ಕುರುಹುಗಳು, ಇ.ದ., ಸಂ.೧೧, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು

**ಪಿ ಎಚ್‌ಡಿ. ಮಹಾಪ್ರಬಂಧಗಳು**

ಕರಿಬಸಪ್ಪ ಎ., ೨೦೦೩: ಬಳ್ಳಾರಿ ಜಿಲ್ಲೆಯ ಐತಿಹ್ಯಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ

ಚಾರುಲತಾ, ೨೦೧೫: ಬ್ರಹ್ಮಗಿರಿ ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ

ಜಯಣ್ಣ ಯು., ೨೦೦೨: ಮೊಳಕಾಲ್ಮೂರು ತಾಲೂಕಿನ ಪುರಾತತ್ವೀಯ ಪರಿಸರ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ

ಶಿವತಾರಕ್ ಕೆ.ಬಿ., ೧೯೯೯: ತುಮಕೂರು ಜಿಲ್ಲೆಯ ಪುರಾತತ್ವ ಕುರುಹುಗಳು ಒಂದು ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ

**ಎಂ ಫಿಲ್ ಪ್ರಬಂಧಗಳು (ಅಪ್ರಕಟಿತ)**

ಬಸವರಾಜ ಹೆಚ್.ಎಂ, ೨೦೦೨: ಗುಡೇಕೋಟೆ ಒಂದು ಚಾರಿತ್ರಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ

ಲಕ್ಷ್ಮಣ ಎಲ್.ಡಿ., ೨೦೧೩: ಹೊಸಪೇಟೆ ಪರಿಸರದ ಕಬ್ಬಿಣದ ಕುಲುಮೆಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ

ಲೋಕೇಶ ಜಿ.ಎಂ., ೨೦೧೦: ಚಿನ್ನಹಗರಿ ನದಿ ಪರಿಸರದ ಚಾರಿತ್ರಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ

**ಆಂಗ್ಲ ಪುಸ್ತಕಗಳು**

ಅನ್ಸಾರಿ ಝಡ್,ಡಿ, ಮತ್ತು ನಾಗರಾಜ್ ರಾವ್ ಎಂ.ಎಸ್., ೧೯೬೪-೬೫: ಎಕ್ಸಕವೇಷನ್ಸ್ ಆ್ಯಟ್ ಸಂಗನಕಲ್ಲು, ಡೆಕ್ಕನ್ ಕಾಲೇಜು, ಪೋಸ್ಟ್ ಗ್ರಾಜುಯೇಟ್ ಅಂಡ್ ರಿಸರ್ಚ್ ಇನ್ ಸ್ಟಿಟ್ಯೂಟ್, ಪುಣೆ

ಗುರುರಾಜ್ ರಾವ್, ೧೯೭೨: ದಿ ಮೆಗಲಿಥಿಕ್ ಕಲ್ಚರ್ ಇನ್ ಸೌಥ್ ಇಂಡಿಯಾ, ಮೈಸೂರು

ನಾಗರಾಜರಾವ್ ಎಂ.ಎಸ್., ಮತ್ತು ಮಲ್ಹೋತ್ರ.ಕೆ.ಸಿ., ೧೯೬೫: ದಿಸ್ಟೋನ್ ಎಜ್ ಹಿಲ್ ಡೈಲರ್, ಆಫ್ ತೆಕ್ಕಲ ಕೋಟೆ, ಡೆಕ್ಕನ್ ಕಾಲೇಜು, ಪೋಸ್ಟ್ ಗ್ರಾಜುಯೇಟ್ ಅಂಡ್ ರಿಸರ್ಚ್ ಇನ್ ಸ್ಟಿಟ್ಯೂಟ್, ಪುಣೆ

ಜಾನ್‌ಕೇಷಲ್, ೧೮೭೨: ಬಳ್ಳಾರಿ ಡಿಸ್ಟ್ರಿಕ್ ಗೆಜೆಟಿಯರ್

ಪದ್ದಯ್ಯ ಕೆ., ೧೯೬೮: ಪ್ರೀ ಅಂಡ್ ಪ್ರೋಟೋ ಹಿಸ್ಟಾರಿಕ್ ಇನ್ವೆಸ್ಟಿಗೇಶನ್ಸ್ ಇನ್ ಸುರುಪುರ ದೋಅಬ್, ಲೀಡಿನ್

ಮೆಡೋಸ್ ಟೇಲರ್, ೧೯೪೫: ದಿ ಮೆಗಲಿಥಿಕ್ ಟೂಂಬ್ಸ್ ಅಂಡ್ ಅದರ್ ರಿಮೇನ್ಸ್ ಇನ್ ದ ಡಕ್ಕನ್ ಅಸ್ಸಿಸ್ಟ್ ಎಜುಕೇಷನ್ ಸರ್ವೀಸ್ ನ್ಯೂ ದೆಹಲಿ

ರಾವ್ ಕೆ.ಪಿ., ೧೯೮೮: ಡೆಕ್ಕನ್ ಮೆಗಲಿಥಿಸ್, ಸಂದೀಪ ಪ್ರಕಾಶನ ದೆಹಲಿ

ಸುಂದರ ಅ., ೧೯೭೫: ಅರ್ಲಿ ಛೇಂಬರ್ ಟೂಂಬ್ಸ್ ಆಫ್ ಸೌಥ್ ಇಂಡಿಯಾ ಕಾನ್ಸೆಪ್ಟ್ ಪಬ್ಲಿಷಿಂಗ್ ಕಂಪನಿ, ನವದೆಹಲಿ

ಸುಬ್ಬರಾವ್.ಬಿ., ೧೯೪೮: ದಿ ಸ್ಟೋನ್ ಎಜ್ ಕಲ್ಚರ್ ಆಫ್ ಬಳ್ಳಾರಿ, ಡೆಕ್ಕನ್ ಕಾಲೇಜು, ಪೋಸ್ಟ್ ಗ್ರಾಜುಯೇಟ್ ಅಂಡ್ ರಿಸರ್ಚ್ ಇನ್ ಸ್ಟಿಟ್ಯೂಟ್, ಪುಣೆ

**ಅಂತರ್ ಜಾಲ ಮಾಹಿತಿ**

**http://en.wikpedia.org/wiki/kudligi**

**karnatakatravel blogspot.com/2013/09/rock-art-at-gudekote fort**

**karnatakatravel blogspot.com/2013/14/megalithic tomb and anthropomorphic-statues of kumathi**

**www.onefivenine.com**

# ೨. ಕೋಷ್ಟಕ

## ಕೂಡ್ಲಿಗಿ ತಾಲೂಕು ಪರಿಸರದ ಪ್ರಾಗೈತಿಹಾಸಿಕ ನೆಲೆಗಳು

| ಕ್ರ.ಸಂ | ಹೆಸರು | ಹಳೆ ಶಿಲಾಯುಗ | ಸೂಕ್ಷ್ಮ ಶಿಲಾಯುಗ | ನವ/ತಾಮ್ರ ಶಿಲಾಯುಗ | ಬೃಹತ್ ಶಿಲಾಯುಗ | ಆದಿ/ ಇತಿಹಾಸ ಕಾಲ |
|---|---|---|---|---|---|---|
| ೧ | ಕುಮತಿ | – | – | – | ✓ | – |
| ೨ | ಹುಲಿಕುಂಟೆ | – | – | – | ✓ | – |
| ೩ | ಅಪ್ಪೇನಹಳ್ಳಿ | – | – | ✓ | ✓ | – |
| ೪ | ತಿಮ್ಮಲಾಪುರ | – | – | – | ✓ | – |
| ೫ | ಬೆಳಗಟ್ಟ | – | – | ✓ | – | – |
| ೬ | ಹಾಲಸಾಗರ | – | – | – | ✓ | – |
| ೭ | ಟಿ.ಕಲ್ಲಹಳ್ಳಿ | – | – | ✓ | ✓ | – |
| ೮ | ಜುಮ್ಮೋಬನಹಳ್ಳಿ | ✓ | – | – | – | – |
| ೯ | ಸುಣ್ಣ ಮರಡಿ | – | – | – | ✓ | – |
| ೧೦ | ಸಿಡೇಗಲ್ಲು | – | ✓ | ✓ | – | – |
| ೧೧ | ಗುಡೇಕೋಟೆ | – | ✓ | – | ✓ | ✓ |
| ೧೨ | ಪೇಟೆನಹಳ್ಳಿ | – | – | ✓ | – | – |
| ೧೩ | ಜರಿಮಲೆ | – | – | ✓ | ✓ | ✓ |
| ೧೪ | ಹುರುಳಿಹಾಳ್ | – | – | – | ✓ | – |
| ೧೫ | ತಿಮ್ಮವ್ವನಹಳ್ಳಿ | – | – | – | ✓ | – |
| ೧೬ | ನಡವಲಹಳ್ಳಿ | – | – | – | ✓ | – |
| ೧೭ | ಓಬಳಾಪುರ | – | ✓ | – | ✓ | – |
| ೧೮ | ನರಸಿಂಹನಗಿರಿ | – | ✓ | – | – | – |
| ೧೯ | ಕರಡಿಹಳ್ಳಿ | – | ✓ | – | – | – |
| ೨೦ | ರಾಮದುರ್ಗ | – | – | ✓ | – | – |
| ೨೧ | ಅಮರದೇವರ ಗುಡ್ಡ | – | – | – | ✓ | – |
| ೨೨ | ಚಿಕ್ಕೆಮಂಡೆ | – | – | – | ✓ | – |
| ೨೩ | ಮಾಲಹಳ್ಳಿ | – | – | – | ✓ | – |
| ೨೪ | ಮಹದೇವಪುರ | – | – | ✓ | ✓ | – |

## ೩. ವಕ್ತೃ ವಿವರ

| ಕ್ರಮ ಸಂ | ಹೆಸರು | ವಯಸ್ಸು | ವೃತ್ತಿ | ಸ್ಥಳ |
|---|---|---|---|---|
| ೧ | ಡಾ. ರಾಜಣ್ಣ | ೫೦ | ಸಹ ಪ್ರಾಧ್ಯಾಪಕರು | ಗುಡೆಕೋಟೆ |
| ೨ | ಮಾರಣ್ಣ | ೫೫ | ಕಲ್ಲು ಹೊಡೆಯುವುವುದು | ಗುಡೆಕೋಟೆ |
| ೩ | ಪ್ರಕಾಶ | ೪೦ | ವ್ಯಾಪಾರಿ | ಅಪ್ಪಯ್ಯನ ಹಳ್ಳಿ |
| ೪ | ಓಬಯ್ಯ | ೬೦ | ಕುರಿ ಸಾಕಾಣಿಕೆ | ಹಾಲಸಾಗರ |
| ೫ | ನಡುವಲ ಮನೆ ರವಿಕುಮಾರ | ೩೮ | ವ್ಯವಸಾಯ | ಕುಮತಿ |
| ೬ | ಹರಿಜನ ಸಿದ್ದಪ್ಪ | ೬೦ | ವ್ಯವಸಾಯ | ಹುಲಿಕುಂಟೆ |
| ೭ | ಸಿದ್ದಪ್ಪನಾಯಕ | ೫೫ | ವ್ಯವಸಾಯ | ಜರಿಮಲೆ |
| ೮ | ಸಣ್ಣಬೋರಯ್ಯ | ೩೨ | ವ್ಯವಸಾಯ | ಕರಡಿಹಳ್ಳಿ |
| ೯ | ಮಂಜುನಾಥ.ಪಿ | ೩೦ | ವ್ಯವಸಾಯ | ಮಡಕಲಕಟ್ಟೆ |
| ೧೦ | ರಂಗನಾಥ.ಟಿ | ೪೦ | ಪತ್ರಿಕಾವರದಿಗಾರರು | ಭೀಮಸಮುದ್ರ |
| ೧೧ | ಸೂರಪ್ಪ | ೩೦ | ಅತಿಥಿ ಶಿಕ್ಷಕ | ತಿಮ್ಮವ್ವನಹಳ್ಳಿ |
| ೧೨ | ಗೌಡರ ಗಂಗಣ್ಣ | ೬೫ | ವ್ಯವಸಾಯ | ಓಬಳಾಪುರ |
| ೧೩ | ದೊಡ್ಡ ಸಿರಿಯಪ್ಪ | ೫೦ | ವ್ಯವಸಾಯ | ಕಲ್ಲಹಳ್ಳಿ |
| ೧೪ | ಗೊಂಚಗಾರಮಲ್ಲೇಶಪ್ಪ | ೬೦ | ವ್ಯವಸಾಯ | ಮೂಲಹಳ್ಳಿ |
| ೧೫ | ತಿಪ್ಪೇಸ್ವಾಮಿ ಹೆಚ್. | ೪೫ | ಅಥಿತಿ ಉಪನ್ಯಾಸಕರು | ಜುಮ್ಮೋಬನಹಳ್ಳಿ |
| ೧೬ | ರಾಜಪ್ಪ | ೩೦ | ಕೂಲಿ | ಹುರುಳಿಯಾಳ್ |
| ೧೭ | ಮೂರಪ್ಪ | ೫೫ | ವ್ಯವಸಾಯ | ಸುಣ್ಣಮರಡಿ |
| ೧೮ | ಡಾ.ಜಯಣ್ಣ ಯು. | ೪೬ | ಉಪನ್ಯಾಸಕರು | ಸಕಲಾಪುರದ ಹಟ್ಟಿ |
| ೧೯ | ಭೀಮಣ್ಣ ಗಜಾಪುರ | ೪೨ | ಪತ್ರಿಕಾವರದಿಗಾರರು | ಕೂಡ್ಲಿಗಿ |
| ೨೦ | ಪ್ರಕಾಶ | ೩೦ | ಅಥಿತಿ ಶಿಕ್ಷಕ | ಅಮರದೇವರಗುಡ್ಡ |
| ೨೧ | ಉಜ್ಜನಿರುದ್ರಪ್ಪ | ೫೦ | ಪತ್ರಿಕಾವರದಿಗಾರರು | ಕೊಟ್ಟೂರು |
| ೨೨ | ವೃಷಬೇಂದ್ರಾಚಾರ್ಯ | ೫೫ | ಶಿಕ್ಷಕರು | ಹೊಸಹಳ್ಳಿ |
| ೨೩ | ದಿನೇಶ್ | ೩೦ | ಪದವೀದರ | ಸಿಡೇಗಲ್ಲು |

೪. ನಕಾಶೆಗಳು



KARNATAKA
DISTRICT
N
MAHARASHTRA
TELANGANA
GOA
ANDHRA PRADESH
TAMIL NADU
KERALA
BIDAR
Bidar
GULBARGA
Kalaburagi
Vijapura
BIJAPUR
Yadgir
YADGIR
Bagalkot
BAGALKOT
BELGAUM
Belagavi
Raichur
RAICHUR
DHARWAD
Dharwad
Gadag
GADAG
KOPPAL
Koppal
BELLARY
Ballari
Karwar
UTTARA KANNADA
Haveri
HAVERI
Davangere
DAVANGERE
Chitradurga
CHITRADURGA
SHIMOGA
Shivamogga
TUMKUR
Tumkuru
CHIKKABALLAPURA
Chikkaballapura
Udupi
UDUPI
CHIKMAGALUR
Chikkamagaluru
HASSAN
Hassan
BANGALORE RURAL
Kolar
KOLAR
BENGALURU
BANGALORE
Mangaluru
DAKSHINA KANNADA
MANDYA
Mandya
Channapatna
RAMANAGARA
Madikeri
KODAGU
Mysuru
MYSORE
CHAMARAJNAGAR
Chamarajanagar
LEGEND
State Boundary
District Boundary
State Capital
District HQ.
Map not to Scale

## TALUK WISE MAP OF BELLARY DISTRICT.




RAICHUR - DIST(SINDANUR - TQ

KARNOOL - DIST. ALOOR TALUK ( A P )

K O P P A L D I S T R I C T.

GADAG - DISTRICT

HAVERI - DISTRICT

D A V A N A G E R E - D I S T R I C T.

CHITRADURGA DIST.(MOLAKALMURU - TQ

ANANTHAPURA DISTRICT(A

SIRUGUPPA

HOSPET

BELLARY

SANDUR

H. B. HALLI

HADAGALI

KUDLIGI

0 15 30
kilometers

Prepared By
Dist. NRDMS Centre,
ZP,Bellary.

I N D

BELLARY
H. B. HAL
HADAGAI
HOSPET
KUDLIGI
SANDUR
SIRUGUPI
Taluk _I
Taluk _I

# ಕೂಡ್ಲಿಗಿ ತಾಲೂಕು ನಕಾಶೆ



ಬೃಹತ್ ಶಿಲಾಯುಗದ ನೆಲೆಗಳು
1.ಹುರಿಕುಂಟೆ
2.ಕುಮತಿ
3.ಗುಡೆಕೋಟೆ
4.ಹುರುಳಿಹಾಳ್
5.ಅಪ್ಪಯ್ಯನಹಳ್ಳಿ
6.ಮಹದೇವಪುರ
7.ಮಡಕಲಕಟ್ಟೆ
8.ಹಾಲಸಾಗರ
9.ಜರಿಮಲೆ
10 ಅಮರದೇವರ ಗುಡ್ಡ
11.ತಿಮ್ಮಪ್ಪನಹಳ್ಳಿ
12.ಕಲ್ಲಹಳ್ಳಿ
13.ಮಾಲಹಳ್ಳಿ
14.ಸುದ್ದಮರಡಿ
15.ಚಿಕ್ಕಮಂಡೆ
16.ಟಿಬಾಪುರ
17.ನಡುವಲ ಹಳ್ಳಿ
ಉ
ಪ
ಪೂ
ದ

## ೫. ಛಾಯಾಚಿತ್ರಗಳು





೧. ಕಂಡಿಕೋಣೆ ಸಮಾಧಿ ಗುಡೇಕೋಟೆ



೨ ಕಂಡಿಕೋಣೆ ಸಮಾಧಿ ಕುಮತಿ



೩. ಹಾದಿ ಕೋಣೆ ಸಮಾಧಿ ನಡುವಲ ಹಳ್ಳಿ





೪. ಚೆಕ್ಕೆ ಕಲ್ಲುಗಳಿಂದ ತುಂಬಿದ ಶಿಲಾ ಸಮಾಧಿಗಳು (ಕಲ್ಲುವೃತ್ತ ಸಮಾಧಿ) ಮಡಕಲಕಟ್ಟೆ




೫. ಮಾನವಾಕೃತಿ ಶಿಲೆಗಳು ಕುಮತಿ



೬. ಮಾನವಾಕೃತಿ ಶಿಲೆ ಹುಲಿಕುಂಟೆ



೭. ನಿಧಿಗಳ್ಳರಿಂದ ಭಗ್ನಗೊಂಡಿರುವ ಮಾನವಾಕೃತಿ ಶಿಲೆ




೮. ವಿವಿಧ ನೆಲೆಗಳಲ್ಲಿ ದೊರೆತಿರುವ ಬೃಹತ್ ಶಿಲಾಯುಗ ಕಾಲದ ಕೆಂಪು ಮತ್ತು ಕಪ್ಪು ವರ್ಣದ ಮಡಿಕೆ ಭಾಗಗಳು ಕೂಡ್ಲಿಗಿ ತಾಲೂಕು







೯. ಬೂದಿ ದಿಬ್ಬದಲ್ಲಿ ಕಂಡುಬಂದಿರುವ ಮಡಿಕೆ ಚೂರು ಮತ್ತು ನೆಲೆಗಟ್ಟು ಕಲ್ಲಹಳ್ಳಿ



೧೦. ಬೂದಿ ದಿಬ್ಬ ಕಲ್ಲಹಳ್ಳಿ



೧೧. ಓಬಳಾಪುರ ಗವಿ





೧೨. ಬೆಟ್ಟದ ಕೆಳಗಿನ ಮತ್ತು ಮೇಲಿನ ಸನ್ಯಾಸಪ್ಪನ ಗವಿಗಳು ಚೆಕ್ಕೆ ಮಂಡಿ





೧೩. ಪಂಚಲಿಂಗೇಶ್ವರ ಗುಹಾಂತರ ದೇವಾಲಯ ಸರ್ವೋದಯ ಗ್ರಾಮ





೧೪. ಕುಲುಮೆ ಮತ್ತು ಕಿಟ್ಟದ ರಾಶಿ ಹುರುಳಿಯಾಳ್





೧೫. ಕುಲುಮೆ ಅವಶೇಷಗಳು ತಿಮ್ಮವ್ವನಹಳ್ಳಿ





೧೬. ಕಬ್ಬಿಣದ ಕುಲುಮೆ ಅವಶೇಷಗಳು ಓಬಳಾಪುರ

೧೭. ಕುಲುಮೆ ಅವಶೇಷಗಳು ಚಿಕ್ಕಮಂಡಿ




೧೮. ಬಿಳಿ ವರ್ಣಚಿತ್ರ ಪಂಚಲಿಂಗೇಶ್ವರ ಗವಿ ಸರ್ವೋದಯ ಗ್ರಾಮ



೧೯. ಮಾನವ ಬೇಟೆಯಾಡುತ್ತಿರುವ ಚಿತ್ರ ಗುಡೇಕೋಟೆ ಬೆಟ್ಟ (ಕೃಪೆ)





೨೦. ಬಿಳಿ ವರ್ಣದ ಚಿತ್ರದಲ್ಲಿ ಮಾನವ ಕುದುರೆ ಸವಾರಿ ಮಾಡುತ್ತಿರುವುದು ಮತ್ತು ಕೆಂಪು ವರ್ಣದ ರೇಖಾ ಚಿತ್ರ ಎಮ್ಮೆಯಾಗಿದೆ. (ಕೃಪೆ) **karnatakatravel blogspot.com/2013/09/rock-art-at-gudekote fort**





೨೧. ಹಾವು ಮತ್ತು ಚಿಂಕೆಯನ್ನೊಲುವ ಚಿತ್ರ ಮಾಲಹಳ್ಳಿ (ದವಳಪ್ಪನ ಗುಂಡು)



೨೨. ಮಾನವಾಕೃತಿಯ ಕುಟ್ಟು ಚಿತ್ರ ಗುಡೇಕೋಟೆ ಬೆಟ್ಟ



೨೩. ನಗ್ನ ಮಾನವಾಕೃತಿಯ ಬಯಲು ಬಂಡೆಯ ಚಿತ್ರ ಸನ್ಯಾಸಪ್ಪನ ಕೆರೆ ದಂಡೆ



೨೪. ಕಂಡಿಕೋಣೆ ಗೋರಿಯಲ್ಲಿ ಕಂಡು ಬಂದಿರುವ ಮಾನವಾಕೃತಿಯ ಕಡ್ಡಿ ಚಿತ್ರಗಳು ಗುಡೇಕೋಟೆ



೨೫. ವಿಶಿಷ್ಟ ರೀತಿಯ ವಾನರ ಬಯಲು ಬಂಡೆ ಚಿತ್ರ ಗುಡೇ ಕೋಟೆ ಬೆಟ್ಟ






೨೬. ಬೆಟ್ಟ ದಿಂದ ಆವೃತವಾಗಿರುವ ಸನ್ಯಾಸಪ್ಪನ ಕೆರೆ ಚೆಕ್ಕಿಮಂಡಿ



೨೮. ಬೆಟ್ಟದ ಮೇಲಿರುವ ನೀರಿನ ದೋಣಿ ಚೆಕ್ಕಿಮಂಡಿ




೨೭. ಗುಡೆಕೋಟೆ ಬೆಟ್ಟ ಪರಿಸರ





೨೮. ನೈಸರ್ಗಿಕ ಗ್ರಾನೈಟ್ ಶಿಲೆಗಳಿಂದ ಕೂಡಿದ ಬೆಟ್ಟ ಪ್ರದೇಶ ಜರಿಮಲೆ



೨೯. ಬೆಟ್ಟದ ಮೇಲಿರುವ ನೀರಿನ ಹೊಂಡ ಜರಿಮಲೆ




೩೦. ನೈಸರ್ಗಿಕ ಕಲ್ಲಾಸರೆ ಚಿಕ್ಕಮಂಡಿ





೩೧. ದವಳಪ್ಪನ ಗುಂಡುವಿನಲ್ಲಿರುವ ತಿರುವುಗುಳಿಗಳು ಮಾಲಹಳ್ಳಿ



೩೨. ವಿಶಿಷ್ಟ ಮಾದರಿಯ ರೇಖಾ ಚಿತ್ರಗಳು ಗುಡೇಕೋಟೆ

